ಓಂ

## ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ರಥೋತ್ಸವಾಹ್ವಾನ ಪತ್ರಿಕಾ

ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳು

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ೧೯೦೮ ಕ್ಕೆ ಸರಿಯಾದ ಅಕ್ಷಯನಾಮ ಸಂವತ್ಸರದ

| | | | |
|---|---|---|---|
| ಮಾಘ ಬಹುಳ ತ್ರಯೋದಶಿ | ಗುರುವಾರ | 26-2-87 | ಶಿವರಾತ್ರಿ ಪೂಜಾದಿಗಳು ವೃಷಭವಾಹನ |
| " " ಚತುರ್ದಶಿ | ಶುಕ್ರವಾರ | 27-2-87 | ರಥೋತ್ಸವ ರುದ್ರಾಕ್ಷಿ ಮಂಟಪೋತ್ಸವ |
| " " ● | ಶನಿವಾರ | 28-2-87 | ಗಜವಾಹನ ಮತ್ತು ಹುಲಿವಾಹನ |
| ಫಾಲ್ಗುಣ ಶುದ್ಧ ಬಿದಿಗೆ | ಭಾನುವಾರ | 1-3-87 | ಮುತ್ತಿನಪಾಲಕಿ ಉತ್ಸವ ಅಶ್ವವಾಹನ |
| " " ತದಿಗೆ | ಸೋಮವಾರ | 2-3-87 | ಬೆಳ್ಳಿಪಾಲಕಿ ಉತ್ಸವ ನವರಂಗಪಾಲಕಿ ಉತ್ಸವ |
| " " ಚೌತಿ | ಮಂಗಳವಾರ | 3-3-87 | ಬಿಲ್ವವೃಕ್ಷವಾಹನ |
| " " ಪಂಚಮಿ | ಬುಧವಾರ | 4-3-87 | ಸಿಂಹವಾಹನ ಮತ್ತು ನಂದಿವಾಹನ |
| " " ಷಷ್ಠಿ | ಗುರುವಾರ | 5-3-87 | [illegible] ಮತ್ತು ನವಿಲ ವಾಹನ |
| " " ಸಪ್ತಮಿ | ಶುಕ್ರವಾರ | 6-3-87 | ಶೇಷವಾಹನ ಮತ್ತು ತೆಪ್ಪೋತ್ಸವ |
| " " ಅಷ್ಟಮಿ | ಶನಿವಾರ | 7-3-87 | ರಾವಣವಾಹನ ಮತ್ತು ಪಂಚಬ್ರಹ್ಮೋತ್ಸವ |

ಮತ್ತು ಮಾಮೂಲಿನಂತೆ "ಎತ್ತಿನ ಪರಿಷೆಯೂ" 3-3-87 ನೇ ಮಂಗಳವಾರ "ದನಗಳ ಪ್ರದರ್ಶನವೂ" ಉತ್ತಮ ರಾಸುಗಳಿಗೆ ಬಹುಮಾನ ವಿತರಣೆಯೂ ನಡೆಯುವಂತೆ ಏರ್ಪಡಿಸಲಾಗಿದೆ. "ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನವೂ" ಮತ್ತು ಪ್ರತಿ ದಿನವೂ ಸಾಯಂಕಾಲ "ಸಾಂಸ್ಕೃತಿಕ ಚಟುವಟಿಕೆಗಳು" ನಡೆಯುವಂತೆ ಏರ್ಪಾಟು ಮಾಡಲಾಗಿದೆ, ಸಕಾಲದಲ್ಲಿ ಬಂದು ಉತ್ಸವಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಕೃಪೆಗೆ ಪಾತ್ರರಾಗಬೇಕೆಂದು ಅಪೇಕ್ಷಿಸುತ್ತೇವೆ.

ಶ್ರೀ ಸಿದ್ಧಗಂಗಾ ಕ್ಷೇತ್ರ
ತುಮಕೂರು ಜಿಲ್ಲೆ.
ತಾ|| 10-2-1987

ಶ್ರೀ ಶ್ರೀ ಸ್ವಾಮಿಗಳವರು

## "ಸಿದ್ಧಗಂಗಾ" ಇಪ್ಪತ್ತುಮೂರರ ಹೊಸ್ತಿಲಲ್ಲಿ

'ಸಿದ್ಧಗಂಗಾ' ಇಪ್ಪತ್ತೆರಡು ವರ್ಷಗಳ ಕಾಲ ನಾಡ ನುಡಿಯ ಸೇವೆ ಸಲ್ಲಿಸಿ ಇಪ್ಪತ್ತುಮೂರನೆಯ ವರ್ಷಕ್ಕೆ ಪಾದಾರ್ಪಣೆ ಮಾಡುತ್ತಿರುವ ಈ ಮಂಗಳ ಮುಹೂರ್ತದಲ್ಲಿ ಮಾನ್ಯ ಓದುಗರಿಗೆ, ಲೇಖಕರಿಗೆ ಮತ್ತು ಜಾಹಿರಾತುಗಳನ್ನು ನೀಡಿ ಪ್ರೋತ್ಸಾಹಿಸಿದ ಮತ್ತು ಆಜೀವ ಸದಸ್ಯರೆಲ್ಲರಿಗೂ ಹೃತ್ಪೂರ್ವಕವಾದ ವಂದನೆಗಳು.

ಇಷ್ಟು ದೀರ್ಘಕಾಲದಿಂದ 'ಸಿದ್ಧಗಂಗಾ' ಮುನ್ನಡೆದು ಬರುತ್ತಿರುವುದು ಸಂತೋಷದ ಸಂಗತಿಯಾಗಿದೆ. ಅನೇಕ ಸಂದರ್ಭಗಳಲ್ಲಿ ಪತ್ರಿಕೆಯ ಬೆಳವಣಿಗೆಗೆ ಎಡರು ತೊಡರುಗಳು ಬರುವುದು ಸಹಜ. ಅವುಗಳನ್ನು ನಿವಾರಿಸಿಕೊಂಡು ಉತ್ತಮ ಮೌಲ್ಯಗಳನ್ನು ಉಳಿಸಿ ಬೆಳೆಸಿಕೊಂಡು ಹೋಗುತ್ತಿರುವುದು ನಾಡಿನಾದ್ಯಂತ ಇರುವ ಧರ್ಮಾಭಿಮಾನಿಗಳಿಂದ ಉತ್ತಮ ಲೇಖನಗಳನ್ನು ಒಳಗೊಂಡು "ಸಿದ್ಧಗಂಗಾ" ಸಮಾಜದ ಬೆಳಕಾಗಿ ಹೊರಬರುತ್ತಿದೆ. ಅದು ಚಿರಾಯುವಾಗಿ ಮುನ್ನಡೆಯಲಿ ಎಂದು ಸಹಸ್ರಾರು ಓದುಗ ಅಭಿಮಾನಿಗಳು ಮೆಚ್ಚಿ ಪತ್ರ ಬರೆದಿದ್ದಾರೆ. ಇದರ ಶ್ರೀರಕ್ಷೆ ತ್ರಿವಿಧ ದಾಸೋಹಮೂರ್ತಿಗಳಾದ ಪರಮ ಪೂಜ್ಯ ಡಾ|| ಶಿವಕುಮಾರ ಸ್ವಾಮಿಗಳು. ಅವರ ಸೇವಾ ಮಣಿಹದಲ್ಲಿ ಅನೇಕ ಬೃಹತ್ ಕಾರ್ಯಗಳು ನಡೆಯುತ್ತಲಿರುವುದು ನಾಡಿಗೆಲ್ಲಾ ತಿಳಿದ ವಿಷಯವಾಗಿದೆ. ಅವರು ಆದರ್ಶವಾದಿಗಳು. ಆಧ್ಯಾತ್ಮಿಕ ಮೌಲ್ಯಗಳನ್ನು ಮೈಗೂಡಿಸಿಕೊಂಡು ಶ್ರೇಷ್ಠ ಶರಣ ಪರಂಪರೆಯ ಮಾರ್ಗದಲ್ಲಿ ಕರ್ಮಯೋಗಿಯಾಗಿ ಶ್ರಮಿಸುತ್ತಿದ್ದಾರೆ. ಇವರ ಕಾರ್ಯಕ್ಷೇತ್ರ ಪಾವಿತ್ರತೆಯಿಂದ ಕೂಡಿದೆ. ಶೈಕ್ಷಣಿಕ ಪ್ರಸಾರಕ್ಕಾಗಿ ತಮ್ಮ ಜೀವನವನ್ನು ಮುಡುಪಾಗಿಟ್ಟು ಸಹಸ್ರ ಸಹಸ್ರ ಬಡವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡಿ ಭವಿಷ್ಯದ ಬಾಳು ಬೆಳಗಲು ನೆರವಾಗುತ್ತಿದ್ದಾರೆ. ಅವರ ಜೀವನದ ದರ್ಶನವು ಎಲ್ಲರನ್ನೂ ಉದಾತ್ತಗೊಳಿಸುತ್ತಿದೆ. ಆದಾಗ್ಯೂ ಕಣ್ಣಿದ್ದೂ ಕುರುಡರಂತೆ ಇರುವ ವ್ಯಕ್ತಿಗಳುಂಟು. ಮಾನವೀಯ ಶ್ರೇಷ್ಠ ಮೌಲ್ಯಗಳನ್ನು ಅರಿತು ಆಚರಿಸಿ ನಡೆದಾಗ ಮಾತ್ರ ಪ್ರತಿಯೊಬ್ಬ ವ್ಯಕ್ತಿಯ ಬದುಕಿಗೆ ಶ್ರೇಷ್ಠತೆ ಬರುತ್ತದೆ. ಶ್ರೀಗಳವರು ತಮ್ಮ ಬದುಕಿನ ನಾನಾ ಮುಖಗಳನ್ನು ಆಚರಿಸಿ ತೋರಿಸುವರೇ ವಿನಃ ಬಾಯಿ ಬರಿಹಲ್ಲಿ ತತ್ವ ಬೋಧಿಸುವವರಲ್ಲ. ನಡೆನುಡಿಗಳು ಶುದ್ಧವಾಗಿ ನಿರ್ಮಲವಾದ ಮನಸ್ಸಿನಿಂದ ನಿರಂತರವಾಗಿ ಕಾರ್ಯಪ್ರವೃತ್ತನಾಗಿ ವ್ಯಕ್ತಿ ಜೀವನವನ್ನು ಸಾಗಿಸಬೇಕೆಂಬುದೇ ಅವರ ದಿವ್ಯ ವಾಣಿ. ಇಂದು ಸಮಾಜದಲ್ಲಿ ನೈತಿಕ ಮೌಲ್ಯಗಳು ಕುಸಿದು ಮೋಡಕವಿದಂತಾಗಿದೆ. ಭೋಗಜೀವನಕ್ಕಾಗಿ ಮೌಲ್ಯಗಳನ್ನು ಬದಿಗೊತ್ತಿ ಪಾಶವೀ ಕೃತ್ಯಗಳಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಇದರಿಂದ ನಮ್ಮ ಭಾರತೀಯ ಸಂಸ್ಕೃತಿ ಮತ್ತು ಪರಂಪರೆಗೆ ಕಳಂಕವಾದಂತಾಗಿದೆ. ಈ ಪರಿಸ್ಥಿತಿಯನ್ನು ಸುಧಾರಿಸಲು ಮಹಾನ್ ವ್ಯಕ್ತಿಗಳ ಜೀವನ ದರ್ಶನ ಮತ್ತು ಸಂದೇಶಗಳನು ಸ್ಮರಿಸಿಕೊಂಡು ಅನುಷ್ಠಾನಕ್ಕೆ

ತರುವ ಪ್ರಯತ್ನ ಮಾಡಿದರೆ ಒಳ್ಳೆಯದು. ಇದಕ್ಕೆ ಪರಮ ಪೂಜ್ಯ ಶ್ರೀ ಶ್ರೀಗಳವರ ದಿನಚರಿ ಜೀವನ ದರ್ಶನವೇ ಸಾಕ್ಷೀಭೂತವಾಗಿದೆ.

ಇದಕ್ಕೆ ಪೂರಕವಾಗಿ ಧರ್ಮಸಂದೇಶವನ್ನು ಮತ್ತು ಶ್ರೀವಾಣಿಯನ್ನು ಹೊತ್ತ 'ಸಿದ್ಧಗಂಗಾ' ಅತ್ಯಧಿಕ ಪ್ರಸಾರದಿಂದ ನಾಡಿನ ಎಲ್ಲಾ ಭಾಗಗಳಲ್ಲೂ ಬೆಳಗಿ ಬರಬೇಕೆಂಬುದು ನಮ್ಮ ಹಂಬಲವಾಗಿದೆ. ಇದರ ಪ್ರಸಾರಕಾರ್ಯದಲ್ಲಿ ತಮ್ಮ ಅಮೂಲ್ಯ ಸಹಾಯ ಸಹಕಾರವನ್ನು ನೀಡಬೇಕೆಂಬುದು ವಿನಮ್ರ ಪ್ರಾರ್ಥನೆ. ನಿಮ್ಮ ನಿಮ್ಮ ಪ್ರದೇಶಗಳಲ್ಲಿ ಬಂಧು ಮಿತ್ರರು "ಸಿದ್ಧಗಂಗಾಕ್ಕೆ" ಸದಸ್ಯರಾಗಲು ತಿಳಿಸಿ ಪ್ರೋತ್ಸಾಹಿಸಿ.

ವಾರ್ಷಿಕ ಚಂದಾ:-20/-ರೂಗಳು
ಆಜೀವ ಸದಸ್ಯತ್ವ:-201/-ರೂಗಳು
(ನಿರಂತರವಾಗಿ ಸಿದ್ಧಗಂಗಾ ನಿಮ್ಮ ಮನೆ ತಲುಪು

ವ್ಯವಹರಿಸಲು ಈ ವಿಳಾಸದೊಡನೆ ಸಂಪರ್ಕಿಸಿ
ಪ್ರಕಾಶಕರು,
'ಸಿದ್ಧಗಂಗಾ' ಮಾಸ ಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ- 72104

**ಶ್ರೀ ಸಿದ್ಧಗಂಗಾ ಮಠ ಮತ್ತು ಜಾತ್ರೆ-1987**

**ಸುಳ್ಳು ಮತ್ತು ಅಪಪ್ರಚಾರಗಳಿಗೆ ಕಿವಿಗೊಡಬೇಡಿ**

* ಸಿದ್ಧಗಂಗೆ ಜಾತ್ರೆ ಯಥಾರೀತಿ ಈ ವರ್ಷವೂ ವೈಭವದಿಂದ ಫೆಬ್ರವರಿ 23 ರಿಂದ ಮಾರ್ಚಿ 9 ರ ವರೆಗೆ ನಡೆಯುತ್ತದೆ.
* ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನವೂ ಸಹ ಇದೇ ಸಂದರ್ಭದಲ್ಲಿ ಆಕರ್ಷಣೀಯ ಮಳಿಗೆಗಳೊಂದಿಗೆ ಪ್ರಾರಂಭವಾಗುತ್ತದೆ.
* ಶ್ರೀ ಮಠದ ಬಗ್ಗೆ ಸುಳ್ಳು ವದಂತಿಗಳನ್ನು, ಆರೋಪಗಳನ್ನು ಸಮಾಜಘಾತಕ ಶಕ್ತಿಗಳು ಹರಡುತ್ತಿವೆ. ನಂಬಬೇಡಿ.
* ಅನಾಮಧೇಯ ಕರಪತ್ರಗಳನ್ನು ಕೆಲವು ದುಷ್ಕರ್ಮಿಗಳು ಹಂಚುತ್ತಿದ್ದಾರೆ. ಅವುಗಳಿಗೆ ಬೆಲೆಕೊಡಬಾರದು.
* ಯಾವುದೇ ರೀತಿಯ ಆತಂಕ ಮತ್ತು ಭಯವಿಲ್ಲ.

—ಶ್ರೀ ಸಿದ್ಧಗಂಗಾ ಮಠ.

## ಕ್ಷೇತ್ರವಾರ್ತೆ

### ಶ್ರೀ ಶ್ರೀ ಉದ್ದಾನ ಶಿವಯೋಗಿಗಳ 46ನೇಯ ವಾರ್ಷಿಕ ಪುಣ್ಯ ಆರಾಧನೆ.

ವರದಿ:— ಹೆಚ್. ಬಿ. ಗಂಗಾಧರಯ್ಯ.

15 ಜನವರಿ 1987 ಪುಣ್ಯ ಸಂಕ್ರಮಣ ನಾಡಿನ ಜನತೆಗೆ ಸಂಕ್ರಾಂತಿಯ ಶುಭಾಶಯಗಳನ್ನು ಹಾರೈಸುವ ಸಂಪ್ರದಾಯ. ಲೋಕಕ್ಕೆ ಮಹಾ ಜ್ಯೋತಿಯಾಗಿ ಬೆಳಗುತ್ತಿರುವ ಸೂರ್ಯಪಥದಲ್ಲಿ ಅಂದಿನಿಂದ ಬದಲಾವಣೆಯಾಗಿ ಚಳಿ ಕಡಿಮೆಯಾಗುತ್ತಾ ಬಿಸಿಲಿನ ತಾಪ ಏರುತ್ತಾ ಹೋಗುತ್ತದೆ. ಈ ಸಂದರ್ಭದಲ್ಲಿ ಆಚರಿಸುವ ವಿಶೇಷ ಹಬ್ಬದಂದು ಶ್ರೀ ಸಿದ್ಧಗಂಗಾ ಮಠದ ಭವಿಷ್ಯದ ಉತ್ತುಂಗ ಶಿಖರದಲ್ಲಿ ಜ್ಯೋತಿ ಹಚ್ಚಿಸಿದ ಶ್ರೀ ಉದ್ದಾನಶಿವಯೋಗಿಗಳ 46ನೇಯ ಪುಣ್ಯ ಆರಾಧನೆಯನ್ನು ಆಚರಿಸಲಾಯಿತು.

ಸಮಾರಂಭವು ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ದಿವ್ಯ ನೇತೃತ್ವದಲ್ಲಿ ನೆರವೇರಿತು. ರಾಜ್ಯದ ನಾನಾ ಭಾಗಗಳಿಂದ ಹರಗುರು ಚರ ಮೂರ್ತಿಗಳು, ಭಕ್ತಾದಿಗಳು ಮತ್ತು ಹಳೆಯ ವಿದ್ಯಾರ್ಥಿಗಳು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಸಮಾರಂಭದಲ್ಲಿ ಭಾಗಿಗಳಾಗಿದ್ದರು

ಮುಖ್ಯ ಅತಿಥಿಗಳಾಗಿ ಸಮಾರಂಭಕ್ಕೆ ಆಗಮಿಸಿದ್ದವರುಗಳೆಂದರೆ ಶ್ರೀ ಹೆಚ್. ಗಂಗಾಧರ್, ಮೈಸೂರು ಶ್ರೀ ಸಿದ್ಧಲಿಂಗಯ್ಯನವರು ಪ್ರಾಚಾರ್ಯರು, ಆರ್. ಸಿ. ಕಾಲೇಜ್ ಬೆಂಗಳೂರು, ಸಾರನಹಳ್ಳಿ ಶ್ರೀ ರೇವಣ್ಣನವರು ರಾಜ್ಯ ಸಮಾಜ ಸಚಿವರು ಮತ್ತು ಶ್ರೀ ಚನ್ನಪ್ಪ ಎರೇಸೀಮೆ, ಸಿದ್ಧಗಂಗಾ ಮಾಸ ಪತ್ರಿಕೆಯ ಸಂಪಾದಕರು.

ಶ್ರೀ ಶ್ರೀ ಶಿವಯೋಗಿಗಳು ಪದವಿ ಶಿಕ್ಷಣ ಪಡೆದವರಲ್ಲ. ಬಡ ರೈತ ಕುಟುಂಬದಲ್ಲಿ ಜನಿಸಿ ಬಾಲ್ಯದಲ್ಲಿಯೇ ಆಧ್ಯಾತ್ಮಿಕ ಮೌಲ್ಯಗಳನ್ನು ಮೈಗೂಡಿಸಿಕೊಂಡು ಮಹಾಮಹಿಮರಾದರು. ಅವರು ದೂರದೃಷ್ಟಿಯುಳ್ಳವರಾಗಿದ್ದರು. ಸ್ವಾತಂತ್ರ್ಯಪೂರ್ವದಲ್ಲಿ ಶಿಕ್ಷಣದ ಸೌಲಭ್ಯವಿಲ್ಲದೆ ಗ್ರಾಮಾಂತರ ಪ್ರದೇಶದ ಮಕ್ಕಳು ಅನಕ್ಷರಸ್ಥರಾಗಿಯೇ ಉಳಿಯುತ್ತಿದ್ದರು. ಶಿಕ್ಷಣದ ಸೌಲಭ್ಯ ಎಲ್ಲರಿಗೂ ಮುಕ್ತವಾಗಿ ದೊರಕುವಂತೆ ಸಣ್ಣ ಪ್ರಮಾಣದಲ್ಲಿ ವಿದ್ಯಾರ್ಥಿನಿಲಯವನ್ನು 1917 ರಲ್ಲಿ ಪ್ರಾರಂಭಿಸಿದರು ಇಂದು ಅದು ವಿಸ್ತಾರವಾಗಿ ಬೆಳೆದು 3500 ವಿದ್ಯಾರ್ಥಿಗಳಿಗೆ ಜ್ಞಾನಪ್ರಸಾರ ಕೇಂದ್ರವಾಗಿದೆ. ಅವರು ಸಚ್ಚಾರಿತ್ರ್ಯವುಳ್ಳ ಮಹಾನುಭಾವರು. ಶ್ರದ್ಧಾಭಕ್ತಿಯಿಂದ ವಿರಕ್ತ ಪೀಠದ ಪರಂಪರೆಯನ್ನು ರಕ್ಷಿಸಿ ಎಲ್ಲಾ ಮಠಾಧಿಪತಿಗಳಿಗೆ ಮಾರ್ಗ

ದರ್ಶನ ಮಾಡಿದವರು. ಇಂದು ಅನೇಕ ಮಠಗಳು ಆಧ್ಯಾತ್ಮಿಕ ನೈತಿಕ ಮೌಲ್ಯಗಳನ್ನು ಬದಿಗೊತ್ತಿ ಆಸೆ ಆವಿಷಗಳಿಗೆ ಬಲಿಯಾಗಿ ಭೋಗಜೀವನ ನಡೆಸುವ ಕೇಂದ್ರಗಳಾಗುತ್ತಿವೆ. ಪ್ರಸ್ತುತ ಸಂದರ್ಭದಲ್ಲಿ ಶ್ರೀ ಉದ್ಧಾನ ಶಿವಯೋಗಿಗಳಂತಹ ಪುಣ್ಯಮೂರ್ತಿಗಳನ್ನು ಆರಾಧಿಸಿ ಸ್ಮರಿಸಿಕೊಳ್ಳುವುದರಿಂದ ನಮ್ಮ ಜೀವನವನ್ನು ಉದಾತ್ತಗೊಳಿಸಿಕೊಳ್ಳಬಹುದೆಂದು ಶ್ರೀ ರಂಗನಾಥನ್ ಹೇಳಿದರು.

ಶ್ರೀ ಮಠವು ತುಮಕೂರು ಜಿಲ್ಲೆಗೆ ಭಾಗ್ಯವಿಶೇಷ. ಈ ಜಿಲ್ಲೆಯ ಬಹಳಷ್ಟು ಮಂದಿ ಇಲ್ಲಿಂದ ಶಿಕ್ಷಣ ಪಡೆದು ಸಮಾಜದ ನಾನಾ ಕ್ಷೇತ್ರಗಳಲ್ಲಿ ಉತ್ತಮ ನಾಗರೀಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಶ್ರೀ ಮಠವನ್ನು ಹಿಂದಿಯ ಉದ್ಧಾನ ಸ್ವಾಮಿಗಳವರ ಕಾಲದಿಂದಲೂ ನೋಡಿದ್ದೇವೆ. ಮಹಾ ಶಿವಯೋಗಿಗಳ ಅಪಾರವಾದ ತ್ಯಾಗದ ಫಲವಾಗಿ ಶ್ರೀ ಮಠವು ನಿರಂತರವಾಗಿ ತನ್ನ ಪುಣ್ಯ ಕಾರ್ಯವನ್ನು ಮುಂದುವರಿಸುತ್ತಲೇ ಇದೆ. ಕೆಲವು ವಿಚ್ಛಿದ್ರಕಾರಕ ಶಕ್ತಿಗಳು ತಲೆ ಎತ್ತಿ ಆಗಾಗ್ಗೆ ಮಠದ ಕೀರ್ತಿ ಗೌರವಗಳಿಗೆ ಧಕ್ಕೆ ತರಲು ಪ್ರಯತ್ನಿಸುತ್ತಿರುವುದು ವಿಷಾದನೀಯ. ಇಂತಹ ರಾಕ್ಷಸೀ ವರ್ತನೆಯಿಂದ ಕೂಡಿದ ಶಕ್ತಿಗಳನ್ನು ಸಮಾಜ ಬೇರು ಸಹಿತ ಕಿತ್ತುಹಾಕಲು ಜಾಗೃತವಾಗಬೇಕೆಂದು ಶ್ರೀ ಎಸ್. ರೇವಣ್ಣನವರು ಹೇಳಿದರು.

1/ನೆಯ ಶತಮಾನ ಒಂದು ಅನ್ವೇಷಣೆಯ ಯುಗ. ಸಮಾಜದಲ್ಲಿ ಮತಾಂಧತೆಯ ಮೌಲ್ಯಗಳು ಕೊಳೆತು ನಾರುತ್ತಿದ್ದವು. ಸಾಮಾನ್ಯ ಜನತೆ ಪಾಶವೀ ಕೃತ್ಯಕ್ಕೆ ಒಳಗಾಗಿ ಧಾರ್ಮಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಮತ್ತು ನೈತಿಕವಾಗಿ ಅನೇಕ ಕಷ್ಟಕಾರ್ಪಣ್ಯಗಳನ್ನು ಅನುಭವಿಸುತ್ತಿದ್ದರು. ಇಂತಹ ಅಮಾನುಷ ಕೃತ್ಯದ ಬಿಡುಗಡೆಗಾಗಿ ಭಕ್ತಿಭಂಡಾರಿ ಬಸವಣ್ಣನವರ ನಾಯಕತ್ವದಲ್ಲಿ ನೂರಾರು ಶರಣರು ಹೋರಾಟ ನಡೆಸಿ ನವ ಸಮಾಜವನ್ನು ನಿರ್ಮಿಸಿದರು. ಇದರ ಫಲವಾಗಿ ಸಾಮಾನ್ಯ ಜನತೆಯನ್ನು ತಿದ್ದಲು ಸಾಕ್ಷರತೆ ಉಂಟುಮಾಡಲು ಮಠಗಳು ಸ್ಥಾಪನೆಯಾದವು. ಅನೇಕ ಮಠಗಳು ಶರಣರ ವಾಣಿಯನ್ನು ಸ್ಮರಿಸಿ ರಚನಾತ್ಮಕ ಕಾರ್ಯಗಳಲ್ಲಿ ತೊಡಗಿವೆ. ಆ ಸಿಟ್ಟಿನಲ್ಲಿ ಶ್ರೀ ಸಿದ್ಧಗಂಗಾ ಮಠ ಮಾಡುತ್ತಿರುವ ಮಹಾಕಾರ್ಯ ಜಗದ್ವಿಖ್ಯಾತವಾಗಿದೆ. ಇದರ ಹಿನ್ನೆಲೆಯೇ ಮುಖ್ಯಕಾರಣ. ಶ್ರೀ ಉದ್ಧಾನ ಶಿವಯೋಗಿಗಳ ಯೋಗಶಕ್ತಿ, ತಪಸ್ಸಿನ ಪ್ರಭಾವ; ಧರ್ಮಾನುಸರಣೆ, ಕ್ರಿಯಾಶೀಲತೆ ಸಚ್ಚಾರಿತ್ರ್ಯ ಮೌಲ್ಯಗಳು ಶ್ರೀ ಮಠದ ಉನ್ನತಿಗೆ ಬಹಳ ಪ್ರಭಾವ ಬೀರಿವೆ. ಶ್ರೀ ಗುರುಗಳು ತೋರಿದ ಮಾರ್ಗದಲ್ಲಿ ಈಗಿನ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಮುನ್ನಡೆದು ಶ್ರೀ ಮಠದ ಧವಳ ಕೀರ್ತಿಯನ್ನು ಬೆಳಗಿದ್ದಾರೆ. ಶ್ರೀ ಉದ್ಧಾನ ಶಿವಯೋಗಿಗಳ ಜೀವನ ದರ್ಶನ ಎಲ್ಲರಿಗೂ ಸನ್ಮಾರ್ಗದಲ್ಲಿ ನಡೆಯುವಂತೆ ದಾರಿದೀಪವಾಗಿದೆ ಎಂದು ಶ್ರೀ ಸಿದ್ಧಲಿಂಗಯ್ಯನವರು ಉಪನ್ಯಾಸ ಮಾಡಿದರು.

ಶ್ರೀ ಮಠದಲ್ಲಿ ಹಿರಿಯ ಹಳೆಯ ವಿದ್ಯಾರ್ಥಿಯಾಗಿ ಶ್ರೀ ಉದ್ಧಾನ ಶಿವಯೋಗಿಗಳನ್ನು ನಾನು ನೋಡುವ ಅವಕಾಶ ಒದಗಿತ್ತು. ಎತ್ತರವಾದ ಆಜಾನುಬಾಹು

ಗಳುಳ್ಳ ವ್ಯಕ್ತಿಗಳಾಗಿದ್ದರು. ಹಳ್ಳಿಗಳಲ್ಲಿ ಸಂಚರಿಸಿ ಧರ್ಮ ಮತ್ತು ದೇವರ ಬಗ್ಗೆ ಜನರಲ್ಲಿ ಸದ್ಭಾವನೆ ಮೂಡಿಸುತ್ತಿದ್ದರು. ಶ್ರೀ ಮಠದ ಪ್ರಸಾದಕ್ಕಾಗಿ ಜನತೆ ಸ್ವಯಂ ಪ್ರೇರಣೆಯಿಂದ ದವಸಧಾನ್ಯಗಳನ್ನು ನೀಡುತ್ತಿದ್ದರು. ಎಲ್ಲಾ ಜಾತಿಯ ವಿದ್ಯಾರ್ಥಿಗಳಿಗೆ ವ್ಯಾಸಂಗಕ್ಕೆ ಪ್ರೋತ್ಸಾಹ ನೀಡಿದರು. ಅವರು ಮಹಾಮಹಿಮರು, ಅವರು ತೋರಿದ ಆಧಾರಸಹಿತವಾದ ಕೆಲವು ಸದೃಶ ಪವಾಡಗಳನ್ನು ಜನತೆ ಕೊಂಡಾಡುತ್ತಿದ್ದರು. ಸಕಲ ಜೀವಾತ್ಮರಿಗೆ ಲೇಸನ್ನು ಬಯಸಬೇಕೆಂಬುದೇ ಅವರ ದಿವ್ಯ ಮಂತ್ರವಾಗಿತ್ತು ಎಂದು ಶ್ರೀ ಚನ್ನಪ್ಪ ಎರೇಸೀಮೆ ಹೇಳಿದರು.

ಕೊನೆಯದಾಗಿ ಹಿರಿಯ ಹಳೆಯ ವಿದ್ಯಾರ್ಥಿಯಾದ ಶ್ರೀ ಬಿ. ಗಂಗಪ್ಪನವರು ಮಾತನಾಡಿದರು. ನಾನು ಅವರ ನಿಕಟವರ್ತಿಯಾದ ಶಿಷ್ಯನಾಗಿದ್ದೆ. ನಾನು ಸಮಾಜದಲ್ಲಿ ಒಬ್ಬ ವ್ಯಕ್ತಿಯಾಗಿ ಬಾಳ್ವೆ ನಡೆಸಲು ಅವರ ಅನುಗ್ರಹ ಮತ್ತು ಆಶೀರ್ವಾದಗಳಿಂದ. ಎಲ್ಲಾ ವಿದ್ಯಾರ್ಥಿಗಳೂ ಶಿಸ್ತಿನ ಸಿಪಾಯಿಗಳಾಗಿ ವ್ಯಾಸಂಗದಲ್ಲಿ ತೊಡಗಬೇಕೆಂದು ಅವರ ಹಂಬಲವಾಗಿತ್ತು. ಅವರು ಹೇಳುತ್ತಿದ್ದರು "ಹೆಚ್ಚು ಓದುತ್ತೀರಿ ಕಡಿಮೆ ತಿಳಿದುಕೊಳ್ಳುತ್ತೀರಿ" "ಕಡಿಮೆ ಓದಿ ಹೆಚ್ಚು ತಿಳಿಯಬೇಕು" ಅಂದರೆ ಮಾತು ಮತ್ತು ಕೃತಿ ಒಂದೇ ಆಗಿರಬೇಕು ಎಂಬುದು ಅವರ ಒಳ ಅರ್ಥ. ಆದರೆ ಈಗ ಸಮಾಜದಲ್ಲಿ ನಡೆ-ನುಡಿಗಳು ವಿಪರ್ಯಾಸವಾಗಿವೆ. ಉನ್ನತ ಸ್ಥಾನವನ್ನು ಅಲಂಕರಿಸಿರುವ ವ್ಯಕ್ತಿಗಳು ಶ್ರೀ ಉದ್ಧಾನ ಶಿವಯೋಗಿಗಳ ತತ್ವಾನುಸರಣೆಯ ಬಗ್ಗೆ ಚಿಂತೆ ಮಾಡಿದ್ದೇ ಆದರೆ ಸಮಾಜ ಮತ್ತು ಜನತೆಯನ್ನು ಸನ್ಮಾರ್ಗದಲ್ಲಿ ಸುಲಭವಾಗಿ ಮುನ್ನಡೆಸಬಹುದು.

ಕೊನೆಯಲ್ಲಿ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಾ ಶರಣರ ವಾಣಿಯನ್ನು ಸ್ಮರಿಸಿಕೊಂಡರು "ಶಿವಪಥ ಅರಿವಡೆ ಗುರು ಪಥವೇ ಮೊದಲು" ಈ ವಾಣಿಯನ್ನು ವಿಮರ್ಶೆಮಾಡಿ ಪ್ರತಿಯೊಬ್ಬ ವ್ಯಕ್ತಿ ಮಹಾಗುರುವು ತೋರಿದ ಮಾರ್ಗಾನುಸರಣೆಯನ್ನು ಅನುಷ್ಠಾನಕ್ಕೆ ತರುವ ಪ್ರಯತ್ನಮಾಡಿ ಸಾಧನೆಯಲ್ಲಿ ತೊಡಗಬೇಕು. ಸಾಧನೆ ಇಲ್ಲದೆ ಸಿದ್ಧಿಯಿಲ್ಲ. ಇದು ತಾತ್ವಿಕವಾದವಲ್ಲ, ವೈಜ್ಞಾನಿಕವಾದುದು. ಶ್ರೀ ಮಠವು ದೇಶದ ಮತ್ತು ನಾಡಿನ ಎಲ್ಲ ವರ್ಗದ ಜನತೆಯ ಪ್ರೀತಿ ಆದರಗಳನ್ನು ಗಳಿಸಬೇಕಾದರೆ ನಮ್ಮ ಪೂಜ್ಯ ಗುರುಗಳು ತೋರಿದ ಆದರ್ಶತೆ ಮತ್ತು ಉದಾತ್ತವಾದ ಭಾವನೆಗಳು ಅವರ ಶಿಸ್ತಿನ ಕುಲ ಮೆಯ್ಯಲ್ಲಿ ಮುಳುಗಿ ಮಾನವೀಯ ಮೌಲ್ಯಗಳ ತತ್ವಗಳನ್ನು ಶೋಧಿಸಿ ಹೊರತರಲಾಯಿತು. ನೋಡಿ ಮಾಡಿ ಕಲಿಯುವುದು ಸರಳ. ಬಾಹ್ಯ ಒತ್ತಡಕ್ಕೆ ಸಿಕ್ಕಿಸಿ ಬಲಾತ್ಕಾರ ಮಾಡಿದರೆ ಕಲಿಕೆಯಾಗುವುದು ಕಷ್ಟ. ಇದಕ್ಕೆ ಅಂತರಂಗಶುದ್ಧಿ ಅತಿಮುಖ್ಯ. ತೋರ್ಪಡಿಕೆಯ ಬಾಹ್ಯಜೀವನ ಕಪಟದಿಂದ ಕೂಡಿರುತ್ತದೆ. ನಮ್ಮ ಶ್ರೀಗುರುಗಳ ಅನುಗ್ರಹ ಆಶೀರ್ವಾದದಿಂದ ಶ್ರೀ ಮಠದಲ್ಲಿ ದಾಸೋಹ ಕಾರ್ಯಗಳು ನಿರಂತರವಾಗಿ ನಡೆಯುತ್ತಾ ಬಂದಿವೆ. ಇದರಿಂದಾಗಿ ಪ್ರತ್ಯೇಕವಾಗಿ ಆರಾಧನಾ ಸಮಾರಂಭದ ಅಗತ್ಯವಿಲ್ಲವೆಂದು ಭಾವಿಸಿ

ಆಚರಿಸಲಿಲ್ಲ. ಆದರೆ ಶ್ರೀ ಮಠದ ಹಳೆಯ ವಿದ್ಯಾರ್ಥಿಗಳು ಮತ್ತು ಸಮಾಜ ಬಾಂಧವರು ಮತ್ತು ಭಕ್ತಾದಿಗಳು ಆಚರಿಸಬೇಕೆಂದು ಒತ್ತಾಯಿಸಿದರು. ಇನ್ನು ಮುಂದೆ ಪ್ರತಿ ವರ್ಷ ಪುಣ್ಯ ಸಂಸ್ಮರಣ ಇದೆಂದು ಶ್ರೀ ಗುರುಗಳ ಆರಾಧನಾ ಮಹೋತ್ಸವ ನಡೆಸಲಾಗುತ್ತದೆ ಎಂದು ಹೇಳಿದರು

ಶ್ರೀ ಉದ್ದಾನ ಶಿವಯೋಗಿಗಳ ಆರಾಧನಾ ಮಹೋತ್ಸವ ಇನ್ನು ಮುಂದೆ ಅವಿಚ್ಛಿನ್ನವಾಗಿ ನಡೆಯುವಂತೆ ನಿಧಿ ಕೂಡಿಸಲು ತೀರ್ಮಾನಿಸಲಾಯಿತು. ಅನೇಕ ಭಕ್ತ ಮಹಾಶಯರು ಮತ್ತು ಹಳೆಯ ವಿದ್ಯಾರ್ಥಿಗಳು ಕಾಣಿಕೆಗಳನ್ನು ಅರ್ಪಿಸಿದರು.

ಸಮಾರಂಭದ ಕಾರ್ಯಕ್ರಮವನ್ನು ನಿರೂಪಣೆ ಮಾಡಿದವರು ಶ್ರೀ ಹೆಚ್ ವಿ.
ವೀರಭದ್ರಯ್ಯನವರು ಮತ್ತು ಶ್ರೀ ಬಿ ವೀರಭದ್ರಯ್ಯನವರು ಪ್ರಾರ್ಥನೆ ಶ್ರೀ ಬಿ.
ಎಸ್. ಮಲ್ಲಿಕಾರ್ಜುನಯ್ಯನವರಿಂದ ನಡೆಯಿತು. ಸಮಾರಂಭಕ್ಕೆ ಸ್ವಾಗತ ಕೋರಿ
ದವರು ಶ್ರೀ ಹೆಚ್ ಬಿ. ಗಂಗಾಧರಯ್ಯನವರು ಮತ್ತು ಶ್ರೀ ಎಸ್ ಪಿ ಶಿವಶಂಕರ್
ಶರಣು ಸಮರ್ಪಣೆ ಶ್ರೀ ಕೆ. ಎಸ್. ಶಂಕರಯ್ಯನವರು ಮತ್ತು ಶ್ರೀ ಪಿ. ಎಸ್.
ಚಂದ್ರಶೇಖರಯ್ಯ.

‡‡ ‡‡ ‡‡

## ಶ್ರೀ ಸಿದ್ಧಗಂಗಾ ಮಠದ ಸಂಯುಕ್ತ ವಿದ್ಯಾರ್ಥಿ ಸಂಘದ ಸಮಾರೋಪ ಸಮಾರಂಭ

1986-87ನೇ ಸಾಲಿನ ವಿದ್ಯಾರ್ಥಿ ಸಂಘದ ವಾರ್ಷಿಕೋತ್ಸವ ಸಮಾರಂಭವನ್ನು 22 ಜನವರಿ 987ರಂದ ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ ಡಾ|| ಶಿವಕುಮಾರ ಮಹಾ ಸ್ವಾಮಿಗಳವರ ಸಮ್ಮುಖದಲ್ಲಿ ನೆರವೇರಿಸಲಾಯಿತು.

ವೇದ ಸಂಸ್ಕೃತ ಮಹಾ ವಿದ್ಯಾಲಯದ ವಿದ್ಯಾರ್ಥಿಗಳ ವೇದ ಘೋಷದೊಂದಿಗೆ ಸಭೆ ಆರಂಭವಾಯಿತು.

ಕರ್ನಾಟಕ ರಾಜ್ಯದ ಶಿಕ್ಷಣ ಮಂತ್ರಿಗಳಾದ ಸನ್ಮಾನ್ಯ ಶ್ರೀ ಮಂಜುನಾಥ
ರವರ. ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು ಶಿಕ್ಷಕರು ಕ್ರಿಯಾಶೀಲರಾಗಿ ಕರ್ತವ್ಯ
ದಲ್ಲಿ ತೊಡಗಿ ರಾಷ್ಟ್ರ ಏಳಿಗೆಗಾಗಿ ಶ್ರಮಿಸಬೇಕು. ಸ್ವಾತಂತ್ರ್ಯ ಬಂದು 40 ವರ್ಷಗಳು
ಕಳೆದರೂ ಅನಕ್ಷರಸ್ಥರ ಸಂಖ್ಯೆ ಕಡಿಮೆಯಾಗಿಲ್ಲ ಸಾಕ್ಷರತೆಯ ಕಡೆ ಗಮನಹರಿಸಲು
ಶಿಕ್ಷಣ ಸಂಸ್ಥೆಗಳು ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕು ಸಂಸ್ಕೃತ ಅಭ್ಯಾಸಕ್ಕೆ
ಶ್ರೀ ಮಠ ಮುಕ್ತ ಅವಕಾಶ ಕಲ್ಪಿಸಿರುವುದು ಸ್ವಾಗತಾರ್ಹ. ಸರ್ಕಾರವೇ ಮಾಡಬೇಕಾ
ಗಿರುವ ಸೇವಾ ಕಾರ್ಯಗಳನ್ನು ಜ್ಞಾನ ಪ್ರಸಾರದಲ್ಲಿ ನಾಡಿನ ಸಹಸ್ರಾರು ಬಡ



ಮಕ್ಕಳಿಗೆ ಶ್ರೀ ಶ್ರೀಗಳವರು ಶ್ರಮವಹಿಸಿ ಅನುಕೂಲಗಳನ್ನು ಮಾಡಿರುವುದು ಪ್ರಶಂಸನೀಯವಾದುದೆಂದು ಶ್ರೀ ಮಂಜುನಾಥ್ ಹೇಳಿದರು. ರಾಜ್ಯ ವಿಧಾನ ಸಭೆಯ ಉಪಾಧ್ಯಕ್ಷರಾದ ಶ್ರೀ ಲಕ್ಷ್ಮೀನರಸಿಂಹಯ್ಯನವರು ಅತಿಥಿಯಾಗಿ ಉಪಸ್ಥಿತರಿದ್ದರು. ಪರಮ ಪೂಜ್ಯ ಶ್ರೀ ಶ್ರೀಗಳು ವಿದ್ಯಾ ಪ್ರಸಾರ ಧರ್ಮ ಪ್ರಸಾರ ಕಾರ್ಯಗಳಲ್ಲಿ ಮಾಡಿರುವ ಮಹತ್ತರವಾದ ಸೇವೆ ಶ್ಲಾಘನೀಯವಾಗಿದೆ ಶ್ರೀ ಮಠವು ಶೈಕ್ಷಣಿಕ ಮಹಾ ಕಾರ್ಯದಲ್ಲಿ ಕರ್ನಾಟಕ ರಾಜ್ಯಕ್ಕೆ ವರಪ್ರದವಾಗಿದೆ ಇಲ್ಲಿಯ ಸೇವಾ ಕಾರ್ಯಗಳು ವೈವಿಧ್ಯತೆಯಿಂದ ಕೂಡಿ ಎಲ್ಲಾ ಸಮಾಜಬಾಂಧವರನ್ನು ಆಕರ್ಷಿಸುತ್ತಿದೆ. ವೈಯಕ್ತಿಕವಾಗಿ ನನ್ನ ಜೀವನದ ಮೇಲೆ ಪ್ರಭಾವ ಬೀರಿದವು ಶ್ರೀ ಮಠ ಮತ್ತು ಶ್ರೀ ಶ್ರೀಗಳವರ ಆಧ್ಯಾತ್ಮಿಕ ಜೀವನದ ತತ್ವಗಳು ಎಂದು ಅವರು ಹೇಳಿದರು

ರಾಜ್ಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಶ್ರೀ ವೈ ಕೆ. ಪುಟ್ಟಸೋಮೇಗೌಡರು ವಿವಿಧ ಆಟ, ಕ್ರೀಡೆ ಮತ್ತು ಸಾಹಿತ್ಯಕ ಚಟುವಟಿಕೆಗಳಲ್ಲಿ ಜಯಗಳಿಸಿದ ವಿದ್ಯಾರ್ಥಿಗಳಿಗೆ ಬಹುಮಾನಗಳನ್ನು ವಿತರಣೆ ಮಾಡಿದರು ನಾನು ಶ್ರೀ ಮಠದ ಹಳೆಯ ವಿದ್ಯಾರ್ಥಿ. 1952ನೇ ವರ್ಷದಲ್ಲಿ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದೆ. ಇಂದು ನಾನು ಈ ಉನ್ನತ ಸ್ಥಾನಕ್ಕೆ ಬರಬೇಕಾದರೆ ಶ್ರೀ ಮಠದಲ್ಲಿ ಪರಮ ಪೂಜ್ಯ ಶ್ರೀ ಶ್ರೀಗಳವರ ದಿವ್ಯ ಜೀವನ ದರ್ಶನ ಪ್ರಭಾವ ಬೀರಿತು ಎಂದು ಸ್ಮರಿಸಿಕೊಂಡರು.

ವಿದ್ಯಾರ್ಥಿಗಳು ಪ್ರತಿದಿನ ಸಾಮೂಹಿಕ ಪ್ರಾರ್ಥನಾ ವೇಳೆಯಲ್ಲಿ ಹೇಳುವ ಶ್ರೀ ಶ್ರೀಗಳವರ ಹಿತೋಕ್ತಿಗಳನ್ನು ಗ್ರಹಿಸಿ ಕಷ್ಟಪಟ್ಟು ವ್ಯಾಸಂಗ ಮಾಡಿ ಸತ್ಪ್ರಜೆಗಳಾಗಿ ರಾಷ್ಟ್ರ ಸೇವೆಯಲ್ಲಿ ತೊಡಗಬೇಕೆಂದು ಹೇಳಿದರು.

ಕೊನೆಯಲ್ಲಿ ಶ್ರೀ ಶ್ರೀಗಳವರು ಆಶೀರ್ವಚನ ನೀಡಿ ವಿದ್ಯಾರ್ಥಿಗಳು ಮತ್ತು ಶಿಕ್ಷಕರು ನಿರಂತರವಾದ ಜ್ಞಾನದಾಹ ಉಳ್ಳವರಾಗಿ ದೃಷ್ಟಿ ಕೋನವನ್ನು ನವೀಕರಿಸಿಕೊಳ್ಳಬೇಕೆಂದು ಕರೆಯಿತ್ತರು ಕಾರ್ಯವನ್ನು ನಿರೂಪಣೆ ಮಾಡಿದರು ಶ್ರೀ ಹೆಚ್ ಬಿ. ಗಂಗಾಧರಯ್ಯ, ಶ್ರೀ ಮಲ್ಲಿಕಾರ್ಜುನಯ್ಯ ಪ್ರಾರ್ಥನೆ ಮಾಡಿದರು. ಸಮಾರಂಭಕ್ಕೆ ಸ್ವಾಗತವನ್ನು ಕೋರಿದರು ಶ್ರೀ ಎಸ್ ಪಿ ಶಿವಶಂಕರ್. ವಾರ್ಷಿಕ ವರದಿಯನ್ನು ಶ್ರೀ ಪಿ. ಎಸ್ ಚಂದ್ರಶೇಖರಯ್ಯನವರು ಓದಿದರು. ಶರಣು ಸಮರ್ಪಣೆ ಮಾಡಿದವರು ಶ್ರೀ ಕೆ.ಎಸ್. ಸೂರ್ಯನಾರಾಯಣ ಶಾಸ್ತ್ರಿಗಳು.

‡‡ ‡‡ ‡‡

## ಗಣರಾಜ್ಯೋತ್ಸವ

ಶ್ರೀ ಮಠದ ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ 38 ನೇ ಗಣರಾಜ್ಯ ದಿನಾಚರಣೆಯನ್ನು ಪರಮ ಪೂಜ್ಯ ಶ್ರೀ ಶ್ರೀಗಳವರ ಅಧ್ಯಕ್ಷತೆಯಲ್ಲಿ ಆಚರಿಸಲಾಯಿತು.

ಮುಖ್ಯ ಅತಿಥಿಗಳಾಗಿ ತುಮಕೂರು ವಿಶೇಷ ಜಿಲ್ಲಾಧಿಕಾರಿಗಳಾದ ಶ್ರೀ ಕೆ ಎಂ ಶಂಕರಲಿಂಗೇಗೌಡರು ಧ್ವಜಾರೋಹಣ ಮಾಡುವುದರ ಮೂಲಕ ಸಮಾರಂಭ ಆರಂಭವಾಯಿತು. ಹೆಚ್ ಬಿ ಗಂಗಾಧರಯ್ಯ ಸ್ವಾಗತ ಕೋರಿದರು.

ರಾಷ್ಟ್ರಧ್ವಜ, ರಾಷ್ಟ್ರಗೀತೆಗಳ ಬಗ್ಗೆ ವಿಶೇಷವಾದ ಪೂಜ್ಯ ಭಾವನೆಗಳಿಂದ ನಡೆದುಕೊಳ್ಳಬೇಕು ರಾಷ್ಟ್ರೀಯ ಭಾವನೆಗೆ ಪ್ರಥಮ ಮನ್ನಣೆ ಅನಂತರ ಪ್ರಾದೇಶಿಕ ಭಾವನೆ. ಇದರ ಮಹತ್ವ ತಿಳಿಯದೇ ನಾವು ರಾಷ್ಟ್ರದ್ರೋಹ ಚಟುವಟಿಕೆಗಳಲ್ಲಿ ತೊಡಗಿದ್ದೇವೆ ಇದು ತುಂಬಾ ಅಪಾಯಕಾರಿ. ಈ ಬಗ್ಗೆ ಎಚ್ಚರಿಕೆಯಿಂದಿರಬೇಕೆಂದು ಶ್ರೀ ಶಂಕರಲಿಂಗೇಗೌಡರು ಹೇಳಿದರು

ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಾ ನಮ್ಮ ಭಾರತದಲ್ಲಿ ಜಾತ್ಯಾತೀತ ಸಂವಿಧಾನ ರೂಪುಗೊಂಡು 7 ವರ್ಷಗಳು ಕಳೆದರೂ ಕೋಮು ದ್ವೇಷಗಳು ಅತಿಯಾಗಿ ಬೆಳೆಯುತ್ತಿರುವುದು ವಿಷಾದನೀಯ. ಅಹಿಂಸೆ, ತ್ಯಾಗ ಬಲಿದಾನಗಳಿಂದ ರಾಷ್ಟ್ರ ಸ್ವಾತಂತ್ರ್ಯ ಪಡೆಯಿತು. ಆದರೆ ರಾಷ್ಟ್ರದ ಅಭಿವೃದ್ಧಿ ನಿರೀಕ್ಷಿತ ಮಟ್ಟಕ್ಕೆ ಏರಿಲ್ಲ ದೇಶದಾದ್ಯಂತ ಜ್ವಾಲೆಯಂತೆ ಕೋಮು ಶಕ್ತಿಗಳು ಹೆಮ್ಮರವಾಗಿ ಬೆಳೆಯುತ್ತಿವೆ. ರಾಷ್ಟ್ರ ವಿರೋಧಿ ಚಟುವಟಿಕೆಗಳು ಅವ್ಯಾಹತವಾಗಿ ಸಾಗುತ್ತಿವೆ. ಬಡತನ ನಿರುದ್ಯೋಗ ಸಮಸ್ಯೆಗಳು ಯುವ ಪೀಳಿಗೆಯನ್ನು ಹತಾಶಗೊಳಿಸುತ್ತಿವೆ. ಉನ್ನತ ಸ್ಥಾನದಲ್ಲಿರುವ ನಾಯಕರುಗಳ ಆದರ್ಶಜೀವನ ಸಮಾಜ ಶುದ್ಧೀಕರಣವಾಗಲು ಮಹತ್ವ ಪಾತ್ರವಹಿಸುತ್ತದೆ ಎಂದು ಹೇಳಿದರು.

ವಿವಿಧ ವಿದ್ಯಾಸಂಸ್ಥೆಗಳಿಂದ ವಿದ್ಯಾರ್ಥಿಗಳು ವ್ಯಾಯಾಮ ಪ್ರದರ್ಶನ, ಸಾಂಸ್ಕೃತಿಕ ಮತ್ತು ಮನರಂಜನಾ ಕಾರ್ಯಗಳನ್ನು ವಿಶೇಷ ಆಕರ್ಷಣೆಗಳೊಂದಿಗೆ ನಿರ್ವಹಿಸಿದರು. ಶ್ರೀ ಚಂದ್ರಶೇಖರಯ್ಯನವರು ಶರಣು ಸಮರ್ಪಣೆ ನಡೆಸಿದರು.



# ಸಿದ್ಧಗಂಗಾ


ಸಂಪುಟ-೨೩ ಸಂಚಿಕೆ-೧, ೨ ಜನವರಿ, ಫೆಬ್ರವರಿ ೧೯೮೭


## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಲೋಕ ಆಡುವುದೆಂದು ಲೋಕ ಅನ್ನುವುದೆಂದು
ಏಕೆ ತಳಮಳಿಪೆ ಒಳಗೊಳಗೆ । ನೀನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

• • •

ಸಂಕಲ್ಪ ಸ್ಥಿರವಿರಲಿ ಮನವು ಲಿಂಗದೊಳಿರಲಿ
ಲೋಕ ಕಾರುಣ್ಯ ತುಂಬಿರಲಿ । ಎಂದ
ಸಿದ್ಧಗಂಗಾಗುರುವೆ ಕೃಪೆಯಾಗು ॥

• • •

"ನಿನ್ನ ದಾನವನುಂಡು" ನಿನ್ನ ನೆರಳಲಿ ಅರಳಿ
ಅನ್ಯರ ಸ್ತುತಿಸುವ ಕುನ್ನಿಗಳ । ಏನೆಂಬೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

—ಹೆಚ್. ವಿ. ವೀರಭದ್ರಯ್ಯ.

# ಸಿದ್ಧಗಂಗಾಂತರಂಗ







# ಶ್ರೀವಾಣಿ

ನಮ್ಮ ನಾಡಿನ ಸಂಸ್ಕೃತಿ ಪರಂಪರೆಯಲ್ಲಿ ಅರ್ಥವತ್ತಾದ ಸತ್ ಸಂಪ್ರದಾಯಗಳನ್ನು ಅನುಸರಿಸುತ್ತಾ ಬರಲಾಗಿದೆ. ಅವುಗಳ ಅರ್ಥವತ್ತಾದ ಆಚರಣೆ ಬದುಕಿಗೆ ಬೆಳಕನ್ನು ಕೊಡುತ್ತದೆ ಯೋಗ–ಕ್ಷೇಮ ಎಂಬ ಪದಪ್ರಯೋಗ ಆತ್ಮೀಯರ ಕುಶಲ ವ್ಯವಹಾರದ ಸತ್‌ಸಂಪ್ರದಾಯದ ಬಳಕೆ. ಯೋಗ ಎಂದರೆ 'ಅಪ್ರಾಪ್ತಸ್ಯ ಪ್ರಾಪಣಂ ಯೋಗಃ' ನಾವು ಇದುವರೆವಿಗೂ ಪಡೆಯದೇ ಇರುವ ಉತ್ತಮ ಅನುಕೂಲ ಸುಖ-ಸೌಲಭ್ಯಗಳನ್ನು ಹೊಂದುವುದು. ಉತ್ತರೋತ್ತರ ಉನ್ನತಿ. ತನ್ನ ಶಕ್ತಿಸಾಮರ್ಥ್ಯದಿಂದ, ಗುರುಹಿರಿಯರ ಅನುಗ್ರಹ ಆಶೀರ್ವಾದದಿಂದ, ಭಗವಂತನ ಕೃಪಾಕಟಾಕ್ಷದಿಂದ ಉನ್ನತವಾದ ಸ್ಥಾನ-ಮಾನಗಳು, ಸುಖ-ಸಂಪತ್ತುಗಳನ್ನು ಪಡೆಯುವುದು ಎಂದರ್ಥ. ಈ ದಿಸೆಯಲ್ಲಿ ವ್ಯಕ್ತಿ ನಿರಂತರ ಪ್ರಯತ್ನಶೀಲನಾಗಬೇಕು ಕರ್ತವ್ಯಪರನಾಗಬೇಕು. ಅಭಿವೃದ್ಧಿಶೀಲದತ್ತ ಆತ್ಮೋನ್ನತಿಯ ಮಾರ್ಗದಲ್ಲಿ ಸಾಗಬೇಕು. ಅರ್ಥಾತ್ ಮಾನವ ಜನ್ಮದ ಸಾರ್ಥಕತೆಯಲ್ಲಿ ನಿರಂತರ ಉತ್ಸುಕತೆಯುಳ್ಳವನಾಗಬೇಕು. ಮಾನವ ಮಾನವನಾಗಿ ಬದುಕುವ ಕಲೆಯಲ್ಲಿ ಕುತೂಹಲಿಯಾಗಿರಬೇಕು. ಇನ್ನು ಕ್ಷೇಮ ಎಂದರೆ 'ಪ್ರಾಪ್ತಸ್ಯ ರಕ್ಷಣಂ ಕ್ಷೇಮಃ' ಪಡೆದುದರ ರಕ್ಷಣೆ ಕ್ಷೇಮ ಎಂದು. ಹಿರಿಯರ ಶ್ರಮದಿಂದಲೋ, ಅಸಾಧಾರಣ ತ್ಯಾಗದಿಂದಲೋ ಪಡೆದ ಆಸ್ತಿ ವಿಶ್ವಸ್ಯ ಘನತೆ ಗೌರವಗಳಾಗಲಿ, ಅನುಸರಿಸಿ ಬಂದ ಸತ್ ಪರಂಪರೆಯಾಗಲಿ, ಪಡೆದ ಸ್ಥಾನ-ಮಾನಗಳಾಗಲಿ, ರಾಜಕೀಯ, ಆರ್ಥಿಕ, ಸಾಮಾಜಿಕ ಸ್ವಾತಂತ್ರ್ಯವಾಗಲಿ ಅವುಗಳ ಸ್ವಭಾವಕ್ಕೆ ಸೈಜತೆಗೆ ಧಕ್ಕೆ ಬರದಂತೆ ಕಾಪಾಡಿಕೊಳ್ಳುವುದು. ಮೂಲ ತತ್ವಕ್ಕೆ ಚ್ಯುತಿ ಬರದಂತೆ ಎಚ್ಚರಿಕೆಯಿಂದಿದ್ದು ರಕ್ಷಿಸುವುದು. ಕ್ಷೇಮ ಪದದ ಅರ್ಥ. ಈ ದಿಸೆಯಲ್ಲಿ ಯೋಗ-ಕ್ಷೇಮ ಪದಗಳ ಅರ್ಥವ್ಯಾಪ್ತಿಯನ್ನು ಮನಗಾಣಬೇಕು. ಅವುಗಳ ಬಳಕೆಯ ಸಾಂದರ್ಭಿಕ ಸ್ವಾರಸ್ಯ ಮತ್ತು ಸದಾಶಯಗಳನ್ನು ಅರಿತು ಆಚರಣೆಗೆ ತರಬೇಕು. ಹೇಳುವವರಾಗಲೀ ಕೇಳುವವರಿಗೂ ಅನ್ವಯವಾಗುವ ಮಾತು. ಆಚರಣೆಯಿಲ್ಲದ ಉಪದೇಶ 'ಒಡಕು ಮಡಿಕೆ ನುಡಿದಂತೆ' ಆಗಬಾರದು. ನಡೆನುಡಿಗಳಲ್ಲಿ ಸಾಮರಸ್ಯ ಕೂಡಿರಬೇಕು. 'ನುಡಿದಂತೆ ನಡೆದಾತ ಕೂತಲ್ಲಿ ಆಳ್ವ ಜಗವ' ಎಂಬಂತೆ ಆಡಿದ ಮಾತಿಗೆ ಬೆಲೆ ಕೊಟ್ಟ ಉಪದೇಶಕ್ಕೆ ಸಾರ್ಥಕ ಆದ್ದರಿಂದ ನಮ್ಮ ಸಂಸ್ಕೃತಿಯಲ್ಲಿ ಬೆಳೆದು ಬಂದ ಸತ್‌ಸಂಪ್ರದಾಯಗಳು ಅರ್ಥವಿಲ್ಲದ ಅಂಧ ಪರಂಪರೆಯಾಗಬಾರದು. ಬದುಕಿಗೆ ಮಾರ್ಗದರ್ಶಕವಾಗಬೇಕು.

"ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು

ಪಂ॥ ಚನ್ನಪ್ಪ ಎರೇಸೀಮೆ

ಸಂಪಾದಕರು

ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು

ಬಿ ವೀರಭದ್ರಯ್ಯ

ಟಿ. ಎನ್. ಚಂದ್ರಶೇಖರಯ್ಯ

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ,

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ

ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ 20-00 ರೂ

ಅಜೀವ ಸದಸ್ಯತ್ವ 201-00 ರೂ

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

## ಸಂಕ್ರಾಂತಿ

1986 ಹೋಗಿಯಿತು. 87 ಆಗಮಿಸಿತು. ಕರ್ನಾಟಕದ ರಾಜಕೀಯದಲ್ಲಿ ಹೊಸ ಹೆಜ್ಜೆ ಜಿಲ್ಲಾ. ಪರಿಷತ್ತುಗಳು ರಚನೆ. ಮಂಡಲ ಪಂಚಾಯಿತಿಗಳ ಉದಯ. ಆಡಳಿತ ದೂರದ ದಿಲ್ಲಿಯಿಂದಲ್ಲ, ಹಳ್ಳಿಯಿಂದಲೇ ಎಂಬುದಕ್ಕೆ ಸಿದ್ಧತೆ ಪಕ್ಷಗಳ ಬಲಾಬಲದಲ್ಲಿ ಜನತಾಪಕ್ಷ ಮೇಲುಗೈ. ಪ್ರಬಲ ವಿರೋಧ ಪಕ್ಷವಾಗಿ ಕಾಂಗ್ರೆಸ್. ಆರೋಗ್ಯದಾಯಕ. ಕಾರ್ಯ ನಿರ್ವಹಣೆ, ಸಂಪನ್ಮೂಲಗಳ ಕುರಿತು ನಾನಾಪ್ರಶ್ನೆ ಕುತೂಹಲ. ಹಳ್ಳಿಹಳ್ಳಿಗಳಲ್ಲೆಲ್ಲ ಚುನಾವಣೆಯ ಮಾತು. ಎಲ್ಲವೂ ಪ್ರಜಾಪ್ರಭುತ್ವದ ಧ್ವಜದಡಿಯಲ್ಲಿಯೇ ನಡೆದಿರುವ ವ್ಯವಸ್ಥೆ. ಭವಿಷ್ಯ, ಫಲಿತಾಂಶ ಮುಂದಿನ ದಿನಗಳಲ್ಲಿ.

ಇಷ್ಟರಲ್ಲಿ ಮಠದ ಸೇವಾ ಜೀವನದಲ್ಲಿ 1986 ಕಹಿ ವರ್ಷ. ಕಹಿ ಆರಂಭವಾದದ್ದು 1985ರ ಅಂತ್ಯದಲ್ಲಿಯೇ ಅದರೂ ವಿಜೃಂಭಿಸಿದ್ದು 86ರಲ್ಲಿ. ದುರ್ದೈವ. ಇಡೀ ರಾಜ್ಯದ ಧರ್ಮಾಭಿಮಾನಿಗಳ, ಶ್ರೀ ಮಠದ ಭಕ್ತರ; ಎಲ್ಲ ವರ್ಗದ, ಎಲ್ಲ ಸ್ತರದ ಜನತೆಯ ತಳಮಳ, ಕಾತರ, ಆತಂಕಗಳಿಗೆ ಕಾರಣವಾದ ವರ್ಷ. ಪರಂಪರೆ ಉಳಿಯಬೇಕು. ಪಾವಿತ್ರ್ಯಕ್ಕೆ ಧಕ್ಕೆ ಬರಬಾರದು. ಪರಿಶುದ್ಧ ಚಾರಿತ್ರ್ಯದ ಬುನಾದಿಯ ಮೇಲೆ ಕಟ್ಟಿದ ಧರ್ಮಸೌಧ ಕುಸಿದು ಬೀಳುವಂತಾಗಬಾರದು. ಶತಶತಮಾನಗಳಿಂದ ಬೆಳೆದುಕೊಂಡು ಬಂದ ಕಲ್ಪನೆಗೆ ಆಘಾತವುಂಟಾಗಬಾರದು, ಎಂಬುದರ ವಿರುದ್ಧ ಎದ್ದ ಸ್ವಾರ್ಥದ ಧೂಳು. ಇದರಿಂದಾಗಿ ಕೆಲವರ ಕಣ್ಣು ಕೊಂಚಕಾಲ ಮುಚ್ಚಿದಂತಾದುದು 'ಲೋಕದ ಡೊಂಕು' ಎಂಬುದಕ್ಕೆ ನೇರ ನಿದರ್ಶನ. ಜೀವನ ಧುರದಲ್ಲಿ ಸಮಾಜದ ಅಭಿವೃದ್ಧಿಗೆಂದೇ ತಮ್ಮನ್ನು ಅರ್ಪಿಸಿಕೊಂಡ ತ್ಯಾಗಿಗೆ ಕೆಮ್ಮಣ್ಣು ತಂದ ಮಹಾಜೀವಕ್ಕೆ ಕೊಟ್ಟ ನೋವು. ಇತಿಹಾಸದಲ್ಲಿ ಉಳಿದು ಬರುವ ಕಪ್ಪು ಚುಕ್ಕೆ. ನೋವು ಕೊಟ್ಟವರು ಯಾರೇ ಇರಲಿ, ಯಾವ ಸಾಮರ್ಥ್ಯವೇ ಇರಲಿ ಅಂಥವರ ಸಾಮಾಜಿಕ ಸ್ಥಾನಮಾನಗಳು ಯಾವುದೇ ಇರಲಿ ಕಾಲನ ಬಾಯಿಗೆ ಬೀಳದಿರಲು ಸಾಧ್ಯವೇ ಇಲ್ಲ. ಪರಮ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಈ ಶತಮಾನ ಕಂಡ ಅಪೂರ್ವ ಚೇತನ. ಶಿವಯೋಗಿ ಉದ್ದಾನ ಸ್ವಾಮಿಗಳವರು ಕಂಡು ಕರೆತಂದ "ಅರುಹಿನ ಕುರುಹು". ಧಾರ್ಮಿಕ ಕ್ಷೇತ್ರದಲ್ಲಿ ಸುಂದರವಾಗಿ ಅರಳಿದ ದೇವಮಾನವ ಶಿಲ್ಪ. ಇಂದೂ ಕಾಯಕ-ದಾಸೋಹ ಮಣಿಹದಲ್ಲಿ ಆದರ್ಶ ಉದಾಹರಣೆಯಾಗಿ ಉಳಿದಿರುವ ಜೀವಂತ ಬೆಳಕು. ಇಂಥವರ ವಿಷಯದಲ್ಲೂ ಸಣ್ಣ ಕೀಳು ಮಾತುಗಳಿಂದ, ಹೇಯಕೃತ್ಯಗಳಿಂದ, ಅಪಮಾನಗಳಿಂದ ಧೂಳೆಬ್ಬಿ

ಸಿದ್ದು ತಲೆತಗ್ಗಿಸುವಂಥ ಪ್ರಕರಣ. ನಾಡಿನ ಕೆಲವು ಪತ್ರಿಕೆಗಳು ಮಾಡಿದ ಸುಳ್ಳು, ಪ್ರಚಾರ, ಕಲ್ಪಿತ ವ್ಯಕ್ತಿಗಳ ಲೇಖನಗಳ ವಾದ ಸರಣಿ ನಿಜಕ್ಕೂ ಮರೆಯಲಾಗದ ನೋವು ಎಲ್ಲಕ್ಕಿಂತ ಹೆಚ್ಚು ನೋವೆಂದರೆ ಶ್ರೀಮಠದ ಫಲಾನುಭವಿಗಳೇ, ಹೆಚ್ಚು ಉಪಕೃತರಾದವರೇ, ಶ್ರೀ ಶ್ರೀಗಳವರ ಅಪಾರ ಔದಾರ್ಯದ ಸವಿಯುಂಡವರೇ ಕೃತಘ್ನರಾಗಿ ನಡೆದುಕೊಂಡದ್ದು. ಶ್ರೀಮಠದ ವಿವಿಧ ಶಿಕ್ಷಣ ಸಂಸ್ಥೆಗಳಲ್ಲಿ ಉದ್ಯೋಗ ಪಡೆದು ಕೊಂಡವರು, ತಾಂತ್ರಿಕ, ಶೈಕ್ಷಣಿಕ ಕಾಲೇಜುಗಳಲ್ಲಿ ಪ್ರವೇಶಾವಕಾಶ ಪಡೆದು ಕೊಂಡವರು. ಶ್ರೀ ಶ್ರೀಗಳವರಿಂದ ಒಂದಲ್ಲ ಒಂದು ರೀತಿಯಲ್ಲಿ ಸಹಾಯ ಪಡೆದವರು, ರಾಜಕಾರಣದಲ್ಲಿ ಮೇಲೆ ಬಂದವರು, ಮಠಮಾನ್ಯಗಳನ್ನು ರೂಪಿಸಿ ಕೊಂಡವರು, ದೀಕ್ಷೆ ಸಂಸ್ಕಾರಗಳನ್ನು ಪಡೆದುಕೊಂಡವರು. ಪೂಜ್ಯ ಶ್ರೀಶ್ರೀಗಳವರ ವಿಚಾರದಲ್ಲಿ ನೋವುಂಟಾಗುವಂತೆ ನಡೆದು ಕೊಂಡದ್ದು ಎಂದೂ ಮರೆಯಲಾಗದ್ದು. ಧಾರ್ಮಿಕ ಚರಿತ್ರೆಯಲ್ಲಿ ದಾಖಲಾದ ಕಪ್ಪು ಅಧ್ಯಾಯ.

ಇದೀಗ ಸಂಕ್ರಾಂತಿ. ಸಂಧಿಕಾಲ. ಮುಂದಿನ ಮಹಾ ಕಲ್ಯಾಣಕ್ಕೆ ನಿರ್ಧಾರ ತೆಗೆದು ಕೊಳ್ಳಬೇಕಾದ ಪ್ರಶಸ್ತ ಸನ್ನಿವೇಶ. ಅಖಂಡ ಭಕ್ತಕೋಟಿ ಒಕ್ಕೊರಲಿನಿಂದ ಏಕಚಿತ್ತದಿಂದ, ನಿಸ್ಸೀಮ ನಿಷ್ಠೆಯಿಂದ ಪರಮ ಪೂಜ್ಯ ಶ್ರೀ ಶ್ರೀಗಳವರು ತೆಗೆದು ಕೊಳ್ಳಬಹುದಾದ ನಿರ್ಣಯವನ್ನು ಅನುಮೋದಿಸಬೇಕಾದ, ಸಮರ್ಥಿಸಬೇಕಾದ ಸೂಕ್ತ ಸಂದರ್ಭ. ಶ್ರೀ ಗುರುಮುಂದೆ ನಾನವರ ಹಿಂದೆ "ಶಿವ ಪಥವರಿವೊಡೆ ಗುರು ಪಥವೇ ಮೊದಲು" ಇರುವ ದಾರಿ ಅದೊಂದೆ.

"ಸಿದ್ಧಗಂಗಾ" ಪತ್ರಿಕೆ ಪ್ರಾರಂಭವಾದದ್ದು ತ್ರೈಮಾಸಿಕವಾಗಿ, ಬೆಳೆದು ಬಂದದ್ದು ಮಾಸಿಕವಾಗಿ ಪ್ರಗತಿಯೇ ಅದರ ಸ್ವಭಾವ. ಇಪ್ಪತ್ತೊಂದು ಸಂಕ್ರಾಂತಿಗಳನ್ನು ಕಂಡ ಹರೆಯ ಅದರ ಬೆಳವಣಿಗೆಯಲ್ಲಿ ಸಹಕರಿಸಿದ, ಓದುಗ ಲೇಖಕ, ಜಾಹಿರಾತುದಾರ, ಸಂಪಾದಕ ಬಳಗ, ಅಚ್ಚುಕೂಟದ ಬಂಧುಗಳನ್ನೆಲ್ಲ ತುಂಬು ಹೃದಯದಿಂದ ಸ್ಮರಿಸುವ ಸಂತೋಷ ಪ್ರಕಾಶಕ ಸಂಸ್ಥೆಯಾದ ಹಳೆಯ ವಿದ್ಯಾರ್ಥಿ ಸಂಘಕ್ಕೆ ಕೃತಜ್ಞತೆ. ಈ ಎಲ್ಲಕ್ಕೂ ಶ್ರೀರಕ್ಷೆಯಾಗಿರುವ ಪರಮ ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾ ಸ್ವಾಮಿಗಳವರ ಚರಣ ದಿವ್ಯಗಳಲ್ಲಿ ಶ್ರದ್ಧಾಪೂರ್ಣ ನಮನವನ್ನು ಸಮರ್ಪಿಸುತ್ತ, 1987 ರ ವರ್ಷ ಶುಭವನ್ನುಂಟುಮಾಡಲಿ ಎಲ್ಲರಿಗೆ ಎಂದು ಪ್ರಾರ್ಥಿಸುತ್ತದೆ. "ಸಿದ್ಧಗಂಗಾ" "ಎಳ್ಳು ತಿನ್ನಿ ಒಳ್ಳೆ ಮಾತಾಡಿ."



## ಮಾಣಿಕ್ಯ ದೀಪ್ತಿ

—ಹೆಚ್. ಎಸ್. ಸಿದ್ಧಲಿಂಗಪ್ಪ. ಎಂ. ಎ.
ರೋಗ ನಿವಾರಕ ಮತ್ತು ಸಾಮಾಜಿಕ ವೈದ್ಯ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು
ಬೆಂಗಳೂರು-560002

### ಸಾಕ್ಷರತಾ ಪ್ರಚಾರ

ಎಲ್ಲಿ ಅನಕ್ಷರತೆ ಇರುತ್ತದೆಯೋ, ಅಲ್ಲಿ ಅಜ್ಞಾನ, ದಾರಿದ್ರ್ಯ ತಾಂಡವಾಡುತ್ತಿರುತ್ತದೆ. ರಾಷ್ಟ್ರದ ಪ್ರಗತಿಗೆ ಎಷ್ಟೇ ಯೋಜನೆಗಳನ್ನು ರೂಪಿಸಿದರೂ ಪ್ರಗತಿ ಗಗನ ಕುಸುಮವಾಗುತ್ತಿದೆ. ವಿಜ್ಞಾನ ಯುಗದಲ್ಲಿ ನಿರಕ್ಷರತೆ ಶಾಪವಿದ್ದಂತೆ. ನಾಡಿನ, ರಾಷ್ಟ್ರದ ಬಹುತೇಕ ಸಮಸ್ಯೆಗಳ ಪರಿಹಾರಕ್ಕೆ ನಿರಕ್ಷರತಾ ನಿರ್ಮೂಲನವಾಗಬೇಕು. ಯಾವುದೇ ರಾಷ್ಟ್ರದ ಪ್ರಗತಿ, ಆ ರಾಷ್ಟ್ರದ ಸಾಕ್ಷರತೆಯ ಮೇಲೆ ಅವಲಂಬಿತವಾಗಿರುತ್ತದೆ ಸಾಕ್ಷರತೆ ವ್ಯಕ್ತಿಯ ವಿಕಾಸಕ್ಕೆ ಸಹಕಾರಿ ಎಂದಿದ್ದಾರೆ ಗಾಂಧೀಜೀ

ಶಾಂತಿ, ಅಶಾಂತಿ, ಸುಖ ದುಃಖ, ನೋವು ನಲಿವು, ಇವುಗಳಿಗೆ ಮೂಲ ಮನಸ್ಸು ಮನಸ್ಸನ್ನು ಸುಧಾರಿಸುವುದೇ ಶಿಕ್ಷಣ ಎಂದಿದ್ದಾರೆ ಶಿಕ್ಷಣ ತಜ್ಞರು. ನೂರಾರು ಕೋಟಿ ರೂಪಾಯಿಗಳನ್ನು ಖರ್ಚುಮಾಡಿ ಅತಿ ಶೀಘ್ರದಲ್ಲಿ ಅಣೆಕಟ್ಟುಗಳನ್ನು ನಿರ್ಮಿಸಬಹುದು. ಕೈಗಾರಿಕೆಗಳನ್ನು ಸ್ಥಾಪಿಸಬಹುದು, ದೊಡ್ಡ ದೊಡ್ಡ ಸೌಧಗಳನ್ನು ಕಟ್ಟಬಹುದು. ಆದರೆ ಈ ಮಹಾ ಕಾರ್ಯಗಳನ್ನು ಸಾಧಿಸುವ ವ್ಯಕ್ತಿಯ ಮನಸ್ಸನ್ನು ಪರಿವರ್ತನಗೊಳಿಸುವುದು ಅಷ್ಟೊಂದು ಸುಲಭವಲ್ಲ. ಕೆಲವು ವರ್ಷಗಳು ಬೃಹತ್ ಪ್ರಮಾಣದ ಲೋಕೋಪಯೋಗಿ ಕಟ್ಟಡಗಳ ನಿರ್ಮಾಣ ನಿಂತರೂ ಚಿಂತೆಯಿಲ್ಲ. ಅದಕ್ಕೆ ಬದಲಾಗಿ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ದೊರಕುವಂತಾಗಬೇಕು ಎಂದು ಅರ್ಥ ಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ.

ಸಾಕ್ಷರತೆಗೆ ನಮ್ಮ ಜನಪದರು ಹಿಂದಿನಿಂದಲೂ ಮಹತ್ವವನ್ನು ಕೊಡುತ್ತಾ ಬಂದಿದ್ದಾರೆ ಜನಪದ ಸಾಹಿತ್ಯದಲ್ಲಿ ಸಾಕ್ಷರತೆಗೆ ಸಂಬಂಧಿಸಿದಂತೆ ಜನಪದ ತ್ರಿಪದಿಗಳು ಸಿಗುತ್ತವೆ ಈಗಿನಂತೆ ಹಿಂದೆ ಶಿಕ್ಷಣದ ಸೌಲಭ್ಯಗಳಿಲ್ಲ. ಆಗಿನ ಶಿಕ್ಷಣ ಪದ್ಧತಿಯನ್ನು ಒಂದು ತ್ರಿಪದಿಯಲ್ಲಿ ಹೀಗೆ ವರ್ಣಿಸಿದ್ದಾರೆ.

ಓದೋ ಸಾಲಿಗೆ ಹೋಗಿ ಒಳ್ಳೆ ಬುದ್ಧಿಯ ಕಲಿಯೋ
ಮಗ್ಗಿಯ ಬರಿಯೋ ಮಳಲಾಗ-ನನಕಂದ
ತಗ್ಗಿಸಿ ಹಿಡಿಯೋ ಹಲಗೇಯ

ಶಾಲೆಗೆ ಹೋಗುವ ಮಕ್ಕಳನ್ನು ಕಂಡರೆ ಯಾವ ತಂದೆತಾಯಿಗಳಿಗೆ ತಾನೆ ಸಂತೋಷವಾಗುವುದಿಲ್ಲ ಅವರ ಬಗ್ಗೆ ಅಭಿಮಾನ, ಪ್ರೀತಿ, ವಾತ್ಸಲ್ಯ, ಅವಕ್ಕೆ ಅವಹು

ಓದುವ ಸಾಲ್ಯಾಗ ಮ್ಯಾಗಳ ಮಳವಾಕ
ಓದುವ ಮಗನ ಏನೆಂದು-ಕರೆಯಾಲಿ
ಹೂಮಾಲಿ ಸರವೇ ಊಟ ಬಾರೊ

ಎನ್ನುವಲ್ಲಿ ವಿದ್ಯೆಗೆ ಕೊಟ್ಟ ಮಹತ್ವದ ಪರಿಚಯವಾಗುತ್ತದೆ.

ಓದು ಬರಹ ಬಾರದವರಿಗೆ ಸಮಾಜದಲ್ಲಿ, ಸರಕಾರದಲ್ಲಿ ಬೆಲೆಯಿಲ್ಲ, ಮನ್ನಣೆಯಿಲ್ಲ ಎಂಬುದನ್ನು ಅರಿತ ಜನಪದರು ಅಕ್ಷರ ಕಲಿಯುವಂತೆ ಮಕ್ಕಳಿಗೆ ಬುದ್ಧಿ ಹಾದ ಹೇಳಿದ್ದಾರೆ.

ಸರಕಾರ ಎಂಬೋದು ದರಕಾರ ನಮಗಿಲ್ಲ
ಬರಕೊಳ್ಳೊ ಕಂದ ಮುಗಿಯಾಗ-ಇದ್ದಾರ
ಸರಕಾರದಾಗ ಸಮಪಾಲು

ಭಾರತದಲ್ಲಿ ಸಾಕ್ಷರತಾ ಪ್ರಚಾರ ನಿನ್ನೆ ಮೊನ್ನೆಯದಲ್ಲ. ಎರಡು ಸಾವಿರ ವರ್ಷಗಳ ಹಿಂದೆಯೇ ಸಿಂಧೂ ಬಯಲಿನಲ್ಲಿ ಮಣ್ಣಿನ ಹಲಗೆಗಳ ಮೇಲೆ ಬರೆಯುವ ಪದ್ಧತಿ ಇತ್ತು. ಆದರೆ ವ್ಯವಸ್ಥಿತವಾಗಿ ತಂದವನೆಂದರೆ ಅಶೋಕ ಚಕ್ರವರ್ತಿ. ತನ್ನ ಪ್ರಜೆಗಳು ಶೀಲವಂತರು ಸತ್ಯವಂತರೂ ಧರ್ಮಿಷ್ಠರೂ ಆಗಬೇಕೆಂಬುದು ಅವನ ಬಯಕೆಯಾಗಿತ್ತು. ಅದಕ್ಕಾಗಿ ಅವನು ಹಲವಾರು ಜನಪ್ರಿಯ ಸಾಧನೆಗಳನ್ನು ಬಳಸಿಕೊಂಡ. ಬಂಡೆಗಳ ಮೇಲೆ, ಕಲ್ಲು ಕಂಬಗಳ ಮೇಲೆ ಉಪದೇಶಗಳನ್ನು ಕೊರೆಸಿದ. ತಗಡುಗಳ ಮೇಲೆ ಬರೆಸಿದ. ಮೇಲ್ವಿಚಾರಣೆಗಾಗಿ ಒಬ್ಬ ಮಂತ್ರಿಯನ್ನೇ ನೇಮಿಸಿದ.

ಕರ್ನಾಟಕದಲ್ಲಿ 1912 ರಲ್ಲಿ ಸರ್. ಎಂ. ವಿಶ್ವೇಶ್ವರಯ್ಯ ಅವರು ದಿವಾನರಾಗಿದ್ದಾಗ, ಸಾಕ್ಷರತಾ ಚಳುವಳಿಯನ್ನು ಆರಂಭಿಸಿದರು. ಶಿಕ್ಷಣ ಇಲಾಖೆಯ ವಯಸ್ಕರ ರಾತ್ರಿ ಶಾಲೆಗಳನ್ನು ಸ್ಥಾಪಿಸಿದರು. ಹಲವು ಅಡ್ಡಿ ಆತಂಕಗಳಿಂದ ಕಾರ್ಯಕ್ರಮ ಯಶಸ್ವಿಯಾಗಲಿಲ್ಲ. ಈಗ ಸರ್ಕಾರ ಕೋಟ್ಯಾಂತರ ರೂಪಾಯಿಗಳನ್ನು ವೆಚ್ಚಮಾಡುತ್ತಿದೆ. ಅನೇಕ ಸೌಲಭ್ಯಗಳು ದೊರಕುವಂತಾಗಿದೆ. ಇಷ್ಟಾದರೂ ಕರ್ನಾಟಕದಲ್ಲಿ ಪ್ರತಿ ಹತ್ತು ಜನರಿಗೆ ಆರು ಜನ ನಿರಕ್ಷರರಿದ್ದಾರೆ. ಸಾಕ್ಷರತಾ ಚಳುವಳಿ ಯಶಸ್ವಿಯಾಗಬೇಕಾದರೆ ಎಲ್ಲರ ಸಹಕಾರ ಬೇಕು. ಅದಕ್ಕಾಗಿ ಎಲ್ಲರೂ ದೀಕ್ಷಾಬದ್ಧರಾಗಬೇಕು. ●



# ಬಸವ ಪ್ರತಿಜ್ಞಾ

—ಟಿ. ಎಸ್. ಮಹಾದೇವಯ್ಯ.

ಕಳ್ಳ, ಬಂಧಿಕಾರ, ಹಾವಡಿ, ಹಾದರಿಗ, ಬಂಟನೋಲೆಕಾರನೆಂದೆನಾದರೆ, ನೀ ಮುಂತಾಗಿ ಬಂದ ಭಕ್ತರ ನೀನೆಂದೆನ್ನದಿರ್ದರೆ ಆದೇ ದ್ರೋಹ ನಡೆನುಡಿ ಹುಸಿಯುಂಟಾದರೆ, ಕೂಡಲ ಸಂಗನು ತೋರಿದ ಚನ್ನಬಸವಣ್ಣನಾಣೆ

(ನಡೆನುಡಿಯ ಸಾಮರಸ್ಯ) ಶಿವಶರಣರ ರಾಜ್ಯದ ಮನೆಮಾತಾಗಿತ್ತು. ಹಾಗಿದ್ದರು ಕಳ್ಳತನ, ಹಾದರ ಮೊದಲಾದ ನೀಚಕೃತ್ಯಗಳನ್ನು ಮಾಡುವುದು ಸಾಧ್ಯವಿಲ್ಲ ಹೃದಯಮಂದಿರದಲ್ಲಿ ಹುಟ್ಟುವ ಭಕ್ತಿಯ ಮಧುರ ಝೇಂಕಾರದಲ್ಲಿ ಮತ್ತಾವ ಕೂಗಾಟವೂ ಕೇಳಿಯಲಾರದು. ಹೀಗೆಂದು ತಿಳಿದ ಬಸವೇಶ್ವರನು ಎಲ್ಲರಲ್ಲೂ ಪರಮಾತ್ಮನ ಅಂಶವೆಂದು ಭಾವಿಸಿ ಅವರನ್ನು ಮರ್ಯಾದೆಯಿಂದ ಆದರಿಸುತ್ತಿದ್ದನು.

ಬಾಹ್ಯದಲ್ಲಿ ಮನುಷ್ಯನ ಕೆಲವು ತುಚ್ಛನಡತೆಗಳು ಕಂಡು ಬರಬಹುದು. ಅವುಗಳ ಆಧಾರದಿಂದಲೇ ಭಕ್ತರ ನಡತೆಯನ್ನು ವಿಮರ್ಶಿಸುವುದು ಯಾವಾಗಲೂ ಅಷ್ಟು ಯೋಗ್ಯವಾಗಲಾರದು. ಏಕೆಂದರೆ ಆಸಕ್ತಿ ಬಿಟ್ಟು ನಟಿಸುವ ಮಹಾತ್ಮರೂ ಇರುತ್ತಾರೆ ನಿಷ್ಕಾಮ ಕರ್ಮದ ಆಧಾರದಿಂದ ಭಕ್ತಿಯ ಬಲದಿಂದ ಅವರಿಗೆ ಕರ್ಮಗಳೆಲ್ಲ ಒಂದೇ ವಿಧವಾಗಿ ಕಾಣುತ್ತಿರುತ್ತವೆ ಅದಕ್ಕಾಗಿಯೇ ಬಸವೇಶ್ವರನು ಇಲ್ಲಿ ಹೀಗೆ ನುಡಿದಿರುವನು. ನೀಚವಾದ ಅಥವಾ ಉತ್ತಮವಾದ ವ್ಯವಹಾರವನ್ನು ಸ್ವೀಕರಿಸಿರುವರೆದು ನಾನು ಅವರ ಕಾರ್ಯಕ್ಕೆ ಮಹತ್ವ ಕೊಟ್ಟು ನೀಚತೆ ಉಚ್ಚತೆಗಳನ್ನು ಕಲ್ಪಿಸಿದೆನಾದರೆ ನಿನ್ನ ಆಕಾರದಲ್ಲಿ ಬರುವ ಭಕ್ತರನ್ನು ನೀನಲ್ಲವೆಂದೆನಾದರೆ ಅದು ಬಹು ದೊಡ್ಡ ದ್ರೋಹ. ಇದಕ್ಕೆ ತಪ್ಪಿದನಾದರೆ ಷಟ್ಸ್ಥಲ ಸ್ಥಾಪನಚಾರ್ಯನಾದ ಚನ್ನಬಸವಣ್ಣನಾಣೆಯಿರಲಿ. ●

# ಭಾರತವು ಸಂಪೂರ್ಣ ಸಾರ್ವಭೌಮ ಪ್ರಜಾಸತ್ತಾತ್ಮಕ ಜಾತ್ಯತೀತ ಸಮಾಜವಾದಿ ಗಣರಾಜ್ಯವಾದ ದಿನ ಜನವರಿ 26, 1950.

**ಗ್ರಾಮಸಭೆ ಮತ್ತು ಜಿಲ್ಲಾ ಪರಿಷತ್ತುಗಳನ್ನು ರಚಿಸಿರುವ ಕರ್ನಾಟಕ ರಾಜ್ಯ ಸರಕಾರ ನೀಡುವ ಹೊಸ ಹೆಜ್ಜೆಯು ಮೂಲಕ ಸಂವಿಧಾನದ ಕನಸುಗಳಲ್ಲೊಂದನ್ನು ನನಸಾಗಿಸಿದೆ.**

1933 ರಲ್ಲಿ ಕರ್ನಾಟಕದಲ್ಲಿ ಅಧಿಕಾರಕ್ಕೆ ಬಂದ ಹೊಸ ಸರಕಾರ ಜನತೆಯ ಆಶೋತ್ತರಗಳನ್ನು ಈಡೇರಿಸಲು ಕಂಕಣಬದ್ಧವಾಯಿತು. ಜನಸಮುದಾಯದ ಜೀವನಮಟ್ಟ ಸುಧಾರಿಸಿ ಸಮೃದ್ಧಿ ಮತ್ತು ಸಂತಸವನ್ನು ತಂದುಕೊಡುವ ದಿಶೆಯಲ್ಲಿ ಹೊಸ ಹೊಸ ಮಾರ್ಗಗಳನ್ನು ಕಂಡುಕೊಂಡಿತು.

**ಜನತೆಗೆ ಅಧಿಕಾರ :** ಪ್ರಜಾಪ್ರಭುತ್ವದಲ್ಲಿ "ಪ್ರಜೆಯು ಪ್ರಭು" ಎಂಬ ತತ್ವದಲ್ಲಿ ಅಚಲವಾದ ನಂಬಿಕೆ ಇಟ್ಟಿರುವ ಕರ್ನಾಟಕ ಸರಕಾರ, ಪ್ರಜಾಪ್ರಭುತ್ವ ಅರ್ಥಪೂರ್ಣವಾಗಬೇಕಾದರೆ ಆಡಳಿತದಲ್ಲಿ ಜನತೆಯ ಸಕ್ರಿಯ ಪಾತ್ರ ಅತ್ಯಂತ ಅಗತ್ಯ ಎಂಬುದನ್ನು ಮನಗಂಡಿದೆ.

ಇದಕ್ಕೆ ಮುಖ್ಯವಾಗಿ ಬೇಕಾದದ್ದು ಅಧಿಕಾರ ವಿಕೇಂದ್ರೀಕರಣ. ಆದ್ದರಿಂದಲೇ ಪಂಚಾಯತಿ ರಾಜ್ಯ ಸಂಸ್ಥೆಗಳನ್ನು ರಚಿಸಿ, ಗ್ರಾಮೀಣ ಪ್ರದೇಶಗಳ ಸಮಗ್ರ ಅಭಿವೃದ್ಧಿ ಕಾರ್ಯಗಳಲ್ಲಿ ಜನತೆ ನೇರವಾಗಿ ಪಾಲುಗೊಳ್ಳುವ ವ್ಯಾಪಕ ಅವಕಾಶಗಳನ್ನು ಕಲ್ಪಿಸಿದೆ.

ಈ ಗುರಿ ಸಾಧನೆಗಾಗಿ ಎರಡು ಪ್ರಮುಖ ಚುನಾವಣಾ ಸುಧಾರಣೆಗಳನ್ನು ಕಾರ್ಯಗತಗೊಳಿಸಲಾಗಿದೆ. ಮೊದಲನೆಯದು; ಯುವ ಸಮೂಹ ಸಾರ್ವಜನಿಕ ವಿಚಾರಗಳಲ್ಲಿ ತಮ್ಮ ಅಭಿಮತ ವ್ಯಕ್ತಪಡಿಸಲು ಅನುಕೂಲವಾಗುವಂತೆ ಮತದಾನದ ವಯೋಮಿತಿಯನ್ನು 18 ವರ್ಷಗಳಿಗೆ ಇಳಿಸಿರುವುದು. ಎರಡನೆಯದು; ಈ ಸ್ಥಳೀಯ ಸಂಸ್ಥೆಗಳಲ್ಲಿ ಶೇಕಡ 20 ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಾಗಿಟ್ಟಿರುವುದು. ಇದರಿಂದ ಮಹಿಳೆಯರು ರಾಷ್ಟ್ರಾಭಿವೃದ್ಧಿ ಕಾರ್ಯಗಳಲ್ಲಿ ಹೆಚ್ಚಿನ ಪಾತ್ರವಹಿಸಲು ನೆರವಾಗಿದೆ.

ಈಗ ಪಂಚಾಯತಿ ರಾಜ ವ್ಯವಸ್ಥೆಯ ಮೊದಲ ವರ್ಷವೇ ಜಿಲ್ಲಾ ಪರಿಷತ್ತುಗಳು ಮತ್ತು ಮಂಡಲ ಪಂಚಾಯತಿಗಳಿಗೆ 900 ಕೋಟಿ ರೂಪಾಯಿಗಳನ್ನು ಸರಕಾರ ನೀಡುತ್ತದೆ.

ಪಂಚಾಯತಿ ರಾಜ್ಯ ವ್ಯವಸ್ಥೆಯ ಅನುಷ್ಠಾನದಿಂದ ರಾಜ್ಯದಲ್ಲಿ 2469 ಮಂಡಲ ಪಂಚಾಯತಿಗಳು ಮತ್ತು ಜಿಲ್ಲಾ ಪರಿಷತ್ತುಗಳು ಅಸ್ತಿತ್ವಕ್ಕೆ ಬಂದಿವೆ.

ಈ ಸಂಸ್ಥೆಗಳು ತಮ್ಮ ವ್ಯಾಪ್ತಿಯಲ್ಲಿ ಬರುವ ಪ್ರದೇಶದ ಪ್ರಗತಿಪರ ಕಾರ್ಯಗಳನ್ನು ರೂಪಿಸಿ ಅನುಷ್ಠಾನಗೊಳಿಸುವ ಹಿರಿಯ ಹೊಣೆ ಹೊತ್ತಿವೆ. ಈ ಮಂಡಲ ಪಂಚಾಯತಿಗಳು ಮತ್ತು ಜಿಲ್ಲಾ ಪರಿಷತ್ತುಗಳೇ ನಿಜವಾದ ಅರ್ಥದಲ್ಲಿ ಅಭಿವೃದ್ಧಿ ಕಾರ್ಯ ನಿರ್ವಹಿಸುವ ಮೂಲ ಘಟಕಗಳು.

ಪ್ರಥಮ ಬಾರಿಗೆ ಸಮನಾದ ಪ್ರಾಥಮಿಕ ಹಂತದಿಂದ ಸುಮಾರು 56,000 ಪ್ರಜಾ ಪ್ರತಿನಿಧಿಗಳು ಆಯ್ಕೆಯಾಗಿದ್ದಾರೆ. ಇದರಲ್ಲಿ 29,051 ಜನಸಾಮಾನ್ಯ ವರ್ಗದ ಪ್ರತಿನಿಧಿಗಳು, 11887 ಜನ ಪರಿಶಿಷ್ಟ ಜನಾಂಗದ ಪ್ರತಿನಿಧಿಗಳು ಹಾಗೂ 14356 ಮಹಿಳಾ ಪ್ರತಿನಿಧಿಗಳಿದ್ದಾರೆ. ಮಹಿಳೆಯರಲ್ಲಿ 2469 ಜನ ಪರಿಶಿಷ್ಟ ಜನಾಂಗದ ಪ್ರತಿನಿಧಿಗಳು. ಇವರ ಜೊತೆಗೆ ಜಿಲ್ಲಾ ಪರಿಷತ್ತುಗಳಿಗೆ 887 ಸದಸ್ಯರು ಆಯ್ಕೆಯಾಗಿದ್ದಾರೆ.

1967 ರ ಜನವರಿ 2 ಮತ್ತು 20 ರಂದು ನಡೆದ ಚರಿತ್ರಾರ್ಹ ಚುನಾವಣೆಗಳಲ್ಲಿ 1,82,18,177 ಜನ ಮತದಾರರು ಮತ ಚಲಾಯಿಸಿ ತಮ್ಮ ಪಕ್ಷ ಅಭಿಮತ ವ್ಯಕ್ತಪಡಿಸಿದ್ದಾರೆ.

ಪ್ರಜಾಪ್ರಭುತ್ವದ ಮೂಲ ಈ ಹೆಮ್ಮೆಯ ನಾಡಿನ ಮಣ್ಣಿನ ಮಕ್ಕಳಲ್ಲಿ ಅಡಗಿದೆ ಎಂಬುದನ್ನು ಸ್ಪಷ್ಟಪಡಿಸುವ ಕರ್ನಾಟಕದ ಜನಸಮುದಾಯ ನಿಜಕ್ಕೂ ಅಭಿನಂದನಾರ್ಹರು.

**ಕರ್ನಾಟಕ ವಾರ್ತೆ**

ರಾಜ್ಯದ ಪ್ರಗತಿ ಮತ್ತು ಸಮೃದ್ಧಿಯ ಸಾಕಾರ
ಕರ್ನಾಟಕ ಸರ್ಕಾರ

(ಮುಂದುವರೆದ ಲೇಖನ)

# ಕಾನಾಮಡುವಿನ ಶ್ರೀ ಶ್ರೀ ಶರಣಾರ್ಯರ ಸ್ವಾಮಿಗಳು

—ಬಿ. ನಂಜುಂಡಪ್ಪ.

ಕಾನಾಮಡುವಿಗೆ ಶರಣಾರ್ಯರ ಆಗಮನ:– ಕಾನಾಮಡುವಿನ ಸದ್ಭಕ್ತರು ಶ್ರೀ ಚನ್ನವೀರಸ್ವಾಮಿಗಳೆಂಬ ಜಂಗಮ ಪುಂಗವರ ನೇತೃತ್ವದಲ್ಲಿ ತೋಟವೊಂದರಲ್ಲಿ ಶಿವಗಣಾರಾಧನೆಯನ್ನು ಏರ್ಪಡಿಸಿದ್ದರು. ಆ ಸಂದರ್ಭದಲ್ಲಿ, ಆ ಗ್ರಾಮಕ್ಕೆ ಶಿವಯೋಗಿಗಳೊಬ್ಬರು ಬಂದು ನೆಲಸುವರೆಂದೂ, ಅವರಿಗಾಗಿ ಗದ್ದುಗೆಯೊಂದನ್ನು ನಿರ್ಮಿಸಬೇಕೆಂದೂ ಗುರುಗಳು ಸಲಹೆಯಿತ್ತರು. ಅದರಂತೆ ಗದ್ದುಗೆಯೊಂದು ಸಿದ್ಧವಾಯಿತು

ಭಕ್ತಮಂಡಲಿಯ ನಿರೀಕ್ಷಣೆಯಂತೆ, ಶರಣಾರ್ಯರು ಮುದುಗದಹಳ್ಳಿಯಿಂದ ಕಾನಾಮಡುವಿಗೆ ಬಂದರು ಎತ್ತರವಾದ ನಿಲುವಿನ ಭಸ್ಮ ರುದ್ರಾಕ್ಷಿಭೂಷಿತರಾದ ಶಿವತೇಜಸ್ಸುಳ್ಳ ಶರಣಾರ್ಯರನ್ನು ಸಂದರ್ಶಿಸಿದ ಕೂಡಲೆ ಭಕ್ತಮಂಡಲಿಯವರು ಜಯಘೋಷಮಾಡಿ ಸಾಷ್ಟಾಂಗ ಪ್ರಣಾಮ ಮಾಡಿದರು. ಶರಣಾರ್ಯರು ಚನ್ನವೀರಸ್ವಾಮಿಗಳ ಅಡಿಗೆರಗಿದರು ಪರಸ್ಪರ ವಿಚಾರವಿನಿಮಯವಾಯಿತು. ಉದಾರಿಗಳೂ ಸದ್ಭಕ್ತರೂ ಆದ ಬಸವನಗೌಡ ಗುರುಬಸವನಗೌಡ ಎಂಬ ಸಹೋದರರಿಬ್ಬರು ತಮ್ಮ ತೋಟದಲ್ಲಿ ನೂತನ ಗುರುಗಳಾದ ಶರಣಾರ್ಯರಿಗೆ ಒಂದು ಪರ್ಣಶಾಲೆಯನ್ನು ನಿರ್ಮಿಸಿ, ಸುತ್ತಣ ಭೂಮಿಯನ್ನು ದಾನವಾಗಿ ಅರ್ಪಿಸಿದರು. ಅದು ನಡೆದುದು ಕ್ರಿ. ಶ 1856 ರಲ್ಲಿ.

ದೈನಂದಿನ ಪೂಜೆ ಆಚರಣೆಗಳು ಮುಗಿದ ನಂತರ ಶರಣಾರ್ಯರು ಭಕ್ತರ ಮನೆಗಳಲ್ಲಿ ಭಿಕ್ಷೆಮಾಡಿ, ಗುರುಪಾದ ಪೂಜೆ ಪಾದೋದಕಪ್ರಸಾದಗಳನ್ನು ಮುಗಿಸಿ, ದಾಸೋಹ ನಡೆಸುತ್ತಿದ್ದರು. ಅವರ ದಾಸೋಹವೃತ್ತಿಯನ್ನು ಗಮನಿಸಿ, ಭಕ್ತರು ಧನಧಾನ್ಯಾದಿಗಳನ್ನು ಸಲ್ಲಿಸುತ್ತಿದ್ದರು. ಕಾನಾಮಡುವಿನ ಮಠ ದಾಸೋಹಕ್ಕೆ ಹೆಸರು ಪಡೆಯಿತು ಅಲ್ಲದೆ ಶಿವಭಜನೆ, ಕೀರ್ತನೆ, ಜಂಗಮಾರಾಧನೆ, ಪ್ರವಚನಾದಿಗಳಿಂದ ಜ್ಞಾನದಾಸೋಹವೂ ನಡೆಯುತ್ತಿತ್ತು.

ಶರಣಾರ್ಯರು ಅಂಕಲಿ, ಸಿಂಗರಹಳ್ಳಿ, ರೇಚಣ್ಣನವರ ಗದ್ದುಗೆ, ದುರ್ಗಾವತಿ, ಸುಳ್ಳೋಬನಹಳ್ಳಿ, ದೊಡ್ಡಹಳ್ಳಿ ಮುಂತಾದ ಗ್ರಾಮಗಳಲ್ಲಿ ಸಂಚರಿಸಿ ಅಲ್ಲೆಲ್ಲಾ

ಭಿಕ್ಷದ ಮಠಗಳನ್ನು ಸ್ಥಾಪಿಸಿದರು. ಅವರ ಸೇವಾಭಾವ, ಶಾಂತಿಸೈರಣೆ, ಪೂಜಾನಿಷ್ಠೆ ಮುಂತಾದುವುಗಳಿಂದ ಅವರ ಕೀರ್ತಿ ಎಲ್ಲೆಲ್ಲೂ ಹರಡಿತು.

**ಫಲಾಹಾರಸ್ವಾಮಿಗಳು ಮತ್ತು ಶರಣಾರ್ಯರ ನಿಷ್ಠೆಯ ಪರೀಕ್ಷೆ:-** ಫಲಹಾರ ಸ್ವಾಮಿಗಳೆಂಬ ಜಂಗಮಮೂರ್ತಿಗಳೊಬ್ಬರು ಒಮ್ಮೆ ಮಠಕ್ಕೆ ಬಂದರು. ಶರಣಾರ್ಯರು ಅವರಿಗೆ ಸಷ್ಟಾಂಗ ಪ್ರಣಾಮ ಮಾಡಿ, ಭಕ್ತಿಯಿಂದ ಆದರಿಸಿದರು. ಅವರು ಅಲ್ಲಿಯೇ ಶಿವಯೋಗಾನಂದಲ್ಲಿದ್ದರು. ಅವರು ಶರಣಾರ್ಯರ ನಿಷ್ಠೆಯನ್ನು ನಾನಾರೀತಿಯಲ್ಲಿ ಪರೀಕ್ಷಿಸತೊಡಗಿದರು ಸೇವೆಯಲ್ಲಿ ಕುಂದನ್ನೆಣಿಸುತ್ತಿದ್ದರು; ಕೋಪಿಸಿ ನಿಂದಿಸುತ್ತಿದ್ದರು; ಶಿಕ್ಷಿಸುತ್ತಿದ್ದರು. ಪರಮಶಾಂತಿಯಿಂದ ಅವುಗಳನ್ನೆಲ್ಲಾ ಸಹಿಸುತ್ತಿದ್ದರು. ನಯವಿನಯದಿಂದ ವರ್ತಿಸುತ್ತಿದ್ದರು

ಒಂದು ದಿನ ಬಹಳ ಮಂದಿ ಭಕ್ತರೂ ಜಂಗಮರೂ ಕಾರ್ಯಾರ್ಥವಾಗಿ ಮಠದಲ್ಲಿ ನೆರೆದಿದ್ದರು. ಶರಣಾರ್ಯರು ಅವರ ಸೇವೆಯಲ್ಲಿ ನಿರತರಾಗಿದ್ದರು. ಆ ಸಮಯದಲ್ಲಿ ಫಲಹಾರ ಸ್ವಾಮಿಗಳು ಅಲಭ್ಯವಾದ ವಸ್ತುವೊಂದನ್ನು ತರುವಂತೆ ಶರಣಾರ್ಯರಿಗೆ ಹೇಳಿದರು. ಆದರೆ ಏನುಮಾಡಬೇಕೆಂದು ಯೋಚಿಸುತ್ತಿರುವಲ್ಲಿ, ಫಲಾಹಾರ ಸ್ವಾಮಿಗಳು ಕೋಪಗೊಂಡು, ಕೇಳಿದ್ದನ್ನು ಕೊಡಲಾರದ ನೀನೆಂಥ ಭಕ್ತ ಎಂದುಕೊಂಡು, ಹತ್ತಿರವಿದ್ದ ತೆಂಗಿನಕಾಯನ್ನು ಶರಣಾರ್ಯರ ಮೇಲೆ ಎಸೆದರು ಅದರಿಂದ ಶರಣಾರ್ಯರ ಬೆನ್ನಿಗೆ ಬಲವಾದ ಪೆಟ್ಟಾಗಿ ಪ್ರಜ್ಞೆತಪ್ಪಿ ಬಿದ್ದರು. ಅಲ್ಲಿದ್ದ ಕೆಲವು ಭಕ್ತರು ಶೈತ್ಯೋಪಚಾರ ಮಾಡತೊಡಗಿದರು ಕೆಲವರು ಫಲಾಹಾರಸ್ವಾಮಿಗಳನ್ನು ನಿಂದಿಸಿ ಮಾತನಾಡಿದರು. ಮತ್ತೆ ರಗೊಂಡ ಶರಣಾರ್ಯರು ನಿಂದಿಸಿದವರನ್ನು ಖಂಡಿಸಿದರು. ಅಷ್ಟರಲ್ಲಿ ಎಚ್ಚ ಸ್ವಾಮಿಗಳು ಶರಣಾರ್ಯರ ಶಾಂತಿಗುಣವನ್ನು ಮೆಚ್ಚಿದರಾದರೂ, ಹುಸಿಮುನಿಸುತೋರಿ, ಮುಂದೆ ಹೊರಡಲುದ್ಯುಕ್ತರಾದರು. ಶರಣಾರ್ಯರು ಎದ್ದು ಬಿದ್ದು, ಅಪರಾಧವನ್ನು ಕ್ಷಮಿಸುವಂತೆ ಬೇಡಿಕೊಂಡರು. ಸ್ವಾಮಿಗಳ ಪಾದಗಳಿಗೆ ಗಮನಿಸದೆ, ಕುದುರೆಯನ್ನೇರಿ ಹೊರಟೇಬಿಟ್ಟರು ಆದರೂ ಸ್ವಾಮಿಗಳು ಗಾಬರಿಗೊಂಡು ನೆಗೆದಾಗ, ಸ್ವಾಮಿಗಳು ಸ್ವಲ್ಪದೂರದಲ್ಲೇ ಕುದುರೆ ಬೀಲಿಯ ಮೇಲೆ ಬಿದ್ದುಬಿಟ್ಟರು. ಅದನ್ನು ಕಂಡ ಶರಣಾರ್ಯರು ಬಹಳ ನೊಂದು, ಫಲಾಹಾರ ಸ್ವಾಮಿಗಳನ್ನು ಬಾಚಿ ತಬ್ಬಿ ಮಠಕ್ಕೆ ತಂದು ಉಪಚರಿಸಿ ಪಶ್ಚಾತ್ತಾಪಪಟ್ಟರು.

ಶರಣಾರ್ಯರ ಮನೋಧರ್ಮವನ್ನು ಪರೀಕ್ಷಿಸಿದುದಾಯಿತು. ಅವರ ಶಾಂತಿಸೈರಣೆ ಜಂಗಮಭಕ್ತಿ ಪೂಜಾನಿಷ್ಠೆಗೆ ಸಂತುಷ್ಟರಾದ ಫಲಾಹಾರ ಸ್ವಾಮಿಗಳು, ಅವರನ್ನು ಹಿರಿಯ ಶರಣನೆಂದು ಭಾವಿಸಿ ಹೃತ್ಪೂರ್ವಕ ಆಶೀರ್ವದಿಸಿ, ಮುಂದೆ ಪ್ರಯಾಣ ಮಾಡಿದರು.



**ಉಜ್ಜಯಿನಿ ಕೊಟ್ಟೂರುಗಳಿಗೆ ಶರಣಾರ್ಯರ ಪ್ರಯಾಣ:-** ಬಳಿಕ ಶರಣಾರ್ಯರು ಉಜ್ಜಯಿನಿಗೆ ಪ್ರಯಾಣಮಾಡಿದರು. ಜಗದ್ಗುರು ಗುರುಸಿದ್ಧರಾಜ ದೇಶಿಕೇಂದ್ರ ಸ್ವಾಮಿಗಳ ದರ್ಶನಮಾಡಿ ಸಾಷ್ಟಾಂಗ ಪ್ರಣಾಮಮಾಡಿದರು. ಜಗದ್ಗುರುಗಳು ಅವರನ್ನು ಆದರದಿಂದ ಬರಮಾಡಿಕೊಂಡರು. ಶರಣಾರ್ಯರು ಅಲ್ಲಿ ಕೆಲವು ದಿನ ಗುರುಸೇವಾ ನಿರತರಾಗಿ ಉಳಿದರು ಉಭಯರೂ ಶಿವಾನುಭವ ರಹಸ್ಯ ವಿಚಾರವಿನಿಮಯ ಮಾಡತೊಡಗಿದರು.

ಶರಣಾರ್ಯರು ಮುಂದೆ ಕೊಟ್ಟೂರಿಗೆ ಹೊರಟು, ಸುಪ್ರಸಿದ್ಧ ಕೊಟ್ಟೂರು ಬಸವೇಶ್ವರ ಸ್ವಾಮಿ ಗದ್ದುಗೆ ದರ್ಶನಮಾಡಿ; ಅಲ್ಲಿ ದಾಸೋಹ ಕಾರ್ಯದಲ್ಲಿ ತೊಡಗಿದ್ದರು. ಕೊಟ್ಟೂರು ಭಕ್ತರು ಶರಣೇಶನ ದಾಸೋಹಸೇವೆ, ಶಿವಯೋಗ ನಿಷ್ಠೆ, ಸದ್ಗುಣ ಸಂಪತ್ತನ್ನು ಕಂಡು, ಅವರ ಶಿವಭಕ್ತಿ ಪ್ರಚಾರಕ್ಕೆ ಪೂರ್ಣ ಸಹಕಾರವಿತ್ತರು. ಅವರನ್ನು ಸಾಕ್ಷಾತ್ ಶಿವಸ್ವರೂಪರೆಂದು ಬಗೆದರು ಕೊಟ್ಟೂರು ಬಸವೇಶ್ವರ ಸ್ವಾಮಿ ರಥೋತ್ಸವ ಸಂದರ್ಭದಲ್ಲಿ ಶರಣೇಶನು ಮಾಡಿದ ಸೇವೆ ಅನುಪಮವಾದುದು.

**ಕಾನಾಮಡುವಿಗೆ ಪುನರಾಗಮನ:-** ಕೊಟ್ಟೂರಿನಲ್ಲಿ ನಡೆಯುತ್ತಿದ್ದ ದಾಸೋಹ-ಪ್ರವಚನದ ವಿಷಯ ಎಲ್ಲೆಡೆಯೂ ಹಬ್ಬಿತು. ಕಾನಾಮಡುವಿನ ಭಕ್ತರು ಕೊಟ್ಟೂರಿಗೆ ಬಂದು, ಶರಣಾರ್ಯರನ್ನು ಕಾನಾಮಡುವಿಗೆ ಆಗಮಿಸುವಂತೆ ಒತ್ತಾಯದಿಂದ ಬೇಡಿಕೊಂಡರು. ಅವರ ಪ್ರಾರ್ಥನೆಯಂತೆ ಶರಣಾರ್ಯರು ಮತ್ತೆ ಕಾನಾಮಡುವಿಗೆ ಬಂದರು.

ಕಾನಾಮಡುವಿನಲ್ಲಿ ಅವರ ಜೀವನ ಕ್ರಮಬದ್ಧವಾಯಿತು. ಅವರು ತಮ್ಮ ಪ್ರವಾಸದಲ್ಲಿ ಎಂದೂ ವಾಹನವನ್ನೇರಿದವರಲ್ಲ ಭಕ್ತರು ಬಸವವೊಂದನ್ನು ಕೊಟ್ಟರು. ಶರಣಾರ್ಯರು ಆ ಬಸವನನ್ನು ಪ್ರವಾಸ ಸಮಯದಲ್ಲಿ ಶಿವಪೂಜಾಸಲಕರಣೆಗಳ ಅಸುಬೆಯನ್ನು ಸಾಗಿಸುವ ಕಂಟಲಿ ಬಸವನದಾಯಿತು. ಮತಭೇದವಿಲ್ಲದೆ ಎಲ್ಲಾ ಕೋಮಿನವರೂ ದಾಸೋಹದಲ್ಲಿ ಭಾಗಿಗಳಾಗುತ್ತಿದ್ದರು. ಶರಣಾರ್ಯರ ಮಹತ್ತರ ಪ್ರಭಾವದಿಂದಾಗಿ ಜನರು ನಾನಾಕಡೆಗಳಿಂದ ಬಂದು ಅವರ ದರ್ಶನ ಪಡೆಯುತ್ತಿದ್ದರು. ಧನಧಾನ್ಯಾದಿಗಳು ಸಂಗ್ರಹವಾಗುತ್ತಿದ್ದವು

**ಅಮಲಾಪುರದಲ್ಲಿ ಬಸವಮೂರ್ತಿಯ ಶಿರಸ್ಸಿನ ಪವಾಡ:-** ಕಾನಾಮಡುವಿನ ಉತ್ತರಕ್ಕೆ ಹದಿನೈದು ಮೈಲಿ ದೂರದಲ್ಲಿ ಅಮಲಾಪುರವೆಂಬ ಗ್ರಾಮವಿದೆ. ಅಲ್ಲಿಯ ಬಸವೇಶ್ವರ ಮೂರ್ತಿಯ ಕೊರಳಿನಲ್ಲಿ ಬಿರುಕುಂಟಾಗಿ ಶಿರಸ್ಸು

ಕಳಚಿತು. ಅದರಿಂದ ಏನು ಉತ್ಪಾತ ಸಂಭವಿಸುವುದೋ ಎಂದು ಅಲ್ಲಿನ ಭಕ್ತರು ಗಾಬರಿಗೊಂಡರು. ಕಾನಾಮಡುವಿನ ಶರಣಾರ್ಯರು ಆ ವಿಪತ್ತನ್ನು ಪರಿಹರಿಸ ಬಲ್ಲರೆಂದು ತಿಳಿದು, ಆ ಗ್ರಾಮದವರು ಶರಣಾರ್ಯರ ಬಳಿಗೆ ಬಂದು, ಆ ವಿಪತ್ತನ್ನು ಹೋಗಲಾಡಿಸುವಂತೆ ಪ್ರಾರ್ಥಿಸಿಕೊಂಡರು. ಶಿವಾಜ್ಞೆಯಿದ್ದಂತಾಗಲೆಂದು ನೆನೆಸಿ ಶರಣಾರ್ಯರು ಅಮಲಾಪುರಕ್ಕೆ ಹೋಗುವುದಾಗಿ ತಿಳಿಸಿದರು.

ಅದರಂತೆ, ಬಂದ ಶರಣಾರ್ಯರನ್ನು ಅಲ್ಲಿನ ಭಕ್ತಮಂಡಲಿಯವರು ಬಹಳ ಭಕ್ತಿಗೌರವಗಳಿಂದ ಸ್ವಾಗತಿಸಿದರು. ಬಸವದೇವಾಲಯವು ತೋರಣ ಕಾಣಿಕೆಗಳಿಂದ ಅಲಂಕೃತವಾಯಿತು ಪೂಜಾಸಾಮಗ್ರಿಗಳೂ ಸಿದ್ಧವಾದವು. ತಾವು ಗರ್ಭಗುಡಿಯಲ್ಲಿರುವುದಾಗಿಯೂ, ಭಕ್ತರು ಬಾಗಿಲನ್ನು ಮುಚ್ಚಿ ಬಾಗಿಲಿನ ಎರಡು ಕಡೆಗಳಲ್ಲಿ ತೆಂಗಿನಕಾಯಿ ಮತ್ತು ನಿಂಬೆಹಣ್ಣಿನ ಎರಡೆರಡು ಹೋಳುಗಳನ್ನಿಟ್ಟು, ಬಾಗಿಲನು ಸೂಚನೆಕೊಟ್ಟಾಗ ತೆರೆಯಬೇಕೆಂದೂ ಅಪ್ಪಣೆಮಾಡಿದರು. ಬೆಳಗಾಗುವ ವೇಳೆಗೆ ಸೂಚನೆಯಂತೆ ಬಾಗಿಲು ತೆರೆದರು ಶರಣಾರ್ಯರ ತಪೋನಿಷ್ಠೆಯಿಂದಾಗಿ ಬಸವೇಶ್ವರನ ಶಿರಸ್ಸಿನ ಬಿರುಕು ಮಾಯವಾಗಿ ಮೊದಲಿನಂತೆ ಕೂಡಿಕೊಂಡಿತ್ತು. ಆ ಅದ್ಭುತ ಪವಾಡ ಕಂಡು ಎಲ್ಲರೂ ಆಶ್ಚರ್ಯಪಟ್ಟರು. ಅಲ್ಲಿನ ಸದ್ಭಕ್ತರು ಆನಂದದಿಂದ ಶರಣಾರ್ಯರನ್ನು ಗೌರವಿಸಿ ಬೀಳ್ಕೊಟ್ಟರು.

**ಕಾನಾಮಡುವಿನಲ್ಲಿ ದಾಸೋಹಮಂಟಪದ ಕಟ್ಟಡ ನಿರ್ಮಾಣ:–** ಶಾ. ಶ. ೧೭೯೬ (ಕ್ರಿ. ಶ. 1874) ರಲ್ಲಿ ಭಕ್ತರ ಇಷ್ಟಾನುಸಾರ, ಸಾವಿರಾರು ಮಂದಿ ಭಕ್ತ ಮಾಹೇಶ್ವರರು ಉತ್ಸಾಹದಿಂದ ಭಾಗವಹಿಸಿದ್ದರು. ಆರೋಗಣೆ ಸಿದ್ಧತೆಗಳಾದವು- ಆದರೆ ತುಪ್ಪವಿರಲಿಲ್ಲ. ಶರಣಾರ್ಯರ ಅಪ್ಪಣೆಯಂತೆ ಮಜ್ಜನ ಕೊಳದಿಂದ ಐದು ಕೊಡ ಗಂಗಾಜಲವನ್ನು ಗುರುಸ್ಮರಣೆಯಿಂದ ತಂದು ಪ್ರಸಾದದೊಡನೆ ನೀಡುತ್ತಿರಲಾಗಿ ಅದು ನಿಜವಾದ ತುಪ್ಪವೇ ಆಗಿತ್ತು. ಅದೊಂದು ದೊಡ್ಡ ಪವಾಡವೆಂದು ಎಲ್ಲರೂ ಭಾವಿಸಿದರು ಪಂಕ್ತಿ ಮುಗಿಯುವ ಸಮಯಕ್ಕೆ ಯಾರೋ ಭಕ್ತರು ಐದುಕೊಡಗೆ ಮೀಸಲು ತುಪ್ಪವನ್ನು ತಂದರು. ಶರಣಾರ್ಯರು ಅದನ್ನು ಮೊದಲು ತಂದಿದ್ದ ಮಜ್ಜನ ಕೊಳಕ್ಕೆ ಸುರಿಸಿಬಿಟ್ಟರು. ಅಂದು ಹಿಂದಿನಿಂದ ನಡೆಯುತ್ತಿದ್ದ ಬಸವ ಪುರಾಣ ಪರಿಸಮಾಪ್ತಿಯೂ ನೆರವೇರಿತು.

**ಗುರು ಶಿವೇಂದ್ರರ ಪುನರಾಗಮನ:–** ಶರಣಾರ್ಯರ ದಾಸೋಹ ದೀಪ್ತಿಯ ಪ್ರಭಾವ ಎಲ್ಲೆಡೆಯೂ ಪಸರಿಸಿತು. ತಮ್ಮ ಶಿಷ್ಯನ ಜಂಗಮಾರಾಧನೆಯ ವಾರ್ತೆಯನ್ನು ಕೇಳಿದ ಗುರು ಶಿವೇಂದ್ರರು ಮತ್ತೆ ಕಾನಾಮಡುವಿಗೆ ಬಂದರು. ಶರಣಾರ್ಯರ ಆನಂದಕ್ಕೆ ಮೇರೆ ಇಲ್ಲವಾಯಿತು.



ಕೆಲವು ದಿನ ಕಳೆದ ನಂತರ ಗುರು ಶಿವೇಂದ್ರರು ಶಿಷ್ಯನ ತಾಳ್ಮೆಯನ್ನು ಮತ್ತೆ ಪರೀಕ್ಷಿಸ ತೊಡಗಿದರು. ಕ್ರೂರವಾಗಿ ಬೈಯುವುದು, ಹೊಡೆಯುವುದು, ಕಷ್ಟಕರವಾದ ಕೆಲಸಗಳಲ್ಲಿ ತೊಡಗಿಸುವುದು ಇವೇ ಮುಂತಾದ ಪರೀಕ್ಷೆಗಳಿಂದ ಶರಣಾರ್ಯರ ಸೇವಾನಿಷ್ಠೆ ಕದಲಲಿಲ್ಲ. ಕೊನೆಗೆ ತಮ್ಮ ಶಿಷ್ಯನ ಸದ್ಗುಣಗಳಿಗೆ ಮೆಚ್ಚಿ ಅವರನ್ನು ಆಶೀರ್ವದಿಸಿ ಗುರು ಶಿವೇಂದ್ರರು ಹೊರಟುಬಿಟ್ಟರು.

**ಕುಪ್ಪಿಗ್ರಾಮದ ಮಾರಿಕಾರೋಗ ನಿವಾರಣೆ:–** ಕಾನಾಮಡುವಿಗೆ ಹದಿನೈದು ಮೈಲಿ ದೂರದಲ್ಲಿರುವ ಕುಪ್ಪಿಗ್ರಾಮದಲ್ಲಿ ಒಮ್ಮೆ ಮಾರಿಕಾ ರೋಗವು ತಲೆದೋರಿತು. ಆ ಗ್ರಾಮದವರು ಶರಣಾರ್ಯರ ಬಳಿಗೆ ಬಂದು, ತಮ್ಮ ಗ್ರಾಮಕ್ಕೆ ದಯಮಾಡಿಸಿ ಆ ಭಯಂಕರ ರೋಗವನ್ನು ನಿವಾರಿಸುವಂತೆ ಅನನ್ಯ ಭಕ್ತಿಯಿಂದ ಬೇಡಿಕೊಂಡರು. ಅವರ ಪ್ರಾರ್ಥನೆಯಂತೆ ಶರಣಾರ್ಯರು ಆ ಗ್ರಾಮಕ್ಕೆ ಹೊರಟು, ಊರಿನಲ್ಲಿ ಎಲ್ಲಾ ಕಡೆಯಲ್ಲೂ ಸಂಚರಿಸಿದರು. ಹತ್ತಿರವಿದ್ದ ಗವಿಯೊಂದರಲ್ಲಿ ಕೆಲವು ದಿನವಿದ್ದು ಅಲ್ಲಿ ಗದ್ದುಗೆಯನ್ನು ರಚಿಸಿ ಗುರುವಿನ ಪಾದರಕ್ಷೆಗಳನ್ನಿರಿಸಿದರು. ಅವರ ಸಲಹೆಯಂತೆ ಆ ಗ್ರಾಮದಲ್ಲಿ ಶಿವಾಲಯವನ್ನು ಗ್ರಾಮಸ್ಥರು ಕಟ್ಟಿಸಿದರು. ಮಾರಿಕಾಬೇನೆ ನಿವಾರಣೆಯಾಯಿತು ಕುಪ್ಪಿಗ್ರಾಮದ ಬಹುಮಂದಿ ಶರಣಾರ್ಯರ ಶಿಷ್ಯರಾದರು. ಶರಣಾರ್ಯರನ್ನು ಭಕ್ತಿಗೌರವಗಳಿಂದ ಕಾನಾಮಡುವಿಗೆ ಕಳುಹಿಸಿದರು.

**ಕಾನಾಮಡುವಿನ ಮಠದ ಉತ್ತರಾಧಿಕಾರಿಯ ಆಯ್ಕೆ:–** ಶರಣಾರ್ಯರು ತಮ್ಮ ಸಹೋದರರಾದ ಕರಿಬಸವಣ್ಣನವರ ಸತ್ಪುತ್ರ ಚನ್ನಬಸವಣ್ಣನವರನ್ನು ಭಕ್ತರ ಸಮ್ಮತಿಯಂತೆ, ತಮ್ಮ ಮಠಕ್ಕೆ ಉತ್ತರಾಧಿಕಾರಿಯನ್ನಾಗಿ ಆರಿಸಿದರು. ಆತನಿಗೆ ವಿಧ್ಯುಕ್ತವಾಗಿ ಶಿವದೀಕ್ಷೆಮಾಡಿಸಿ, ಮುಂದಿನ ವಿದ್ಯಾಭ್ಯಾಸ ವ್ಯವಸ್ಥೆ ಮಾಡಿದರು. ಕಾಲಕ್ರಮೇಣ ಚನ್ನಬಸವಣ್ಣನು ವಿದ್ಯಾವಿನಯ ಸಂಪನ್ನನೂ ತೇಜಸ್ವಿಯೂ ಆದನು. ಮಠದ ಕಾರ್ಯಗಳನ್ನು ಯಶಸ್ವಿಯಾಗಿ ನಡೆಸಲು ಸಮರ್ಥನಾದನು

ಕಾಲಕ್ರಮದಲ್ಲಿ ಬಂಧುವರ್ಗದ ಸಿದ್ದಮ್ಮ ಎಂಬ ಸೌಶೀಲ್ಯವತಿಯಾದ ಕನ್ಯೆಯೊಡನೆ ಚನ್ನಬಸವಣ್ಣನವರ ವಿವಾಹವಾಯಿತು. ದಂಪತಿಗಳು ಗುರುಜಂಗಮ ಸೇವಾನಿರತರಾಗಿ ಯಥೋಚಿತವಾಗಿ ದಾಸೋಹವನ್ನು ನಡೆಸುತ್ತಿದ್ದರು.

**ಶರಣಾರ್ಯರ ಲಿಂಗೈಕ್ಯ:–** ಒಮ್ಮೆ ಶರಣಾರ್ಯರು ಮಠದ ಭಕ್ತಭಾಂಧವರನ್ನು ಕರೆಸಿದರು. ಪೂಜಾಪ್ರಸಾದಗಳಾದ ಬಳಿಕ ಅವರಿಗೆ ವೀರಶೈವಧರ್ಮದ ಸ್ವರೂಪವನ್ನು ದಾಸೋಹಾದಿ ಸೇವಾಕಾರ್ಯಗಳಲ್ಲಿ ಅವರ ಕರ್ತವ್ಯವೇನೆಂಬುದನ್ನು

ತಿಳಿಸಿದರು. ಮಾರನೆಯ ದಿನ, ಎಂದರೆ–ಶಾ, ಶ ೧೮೦೫ (ಕ್ರಿ ಶ 1883 ಆಶ್ವಯುಜ ಶು-ಚತುರ್ದಶಿ ಸೋಮವಾರ, ಸೂರ್ಯೋದಯಕ್ಕೆ ಮೊದಲೇ ಜಂಗಮ ಪಾದಪೂಜೆ ಕ್ರಿಯಾಪಾದೋದಕ ಪ್ರಸಾದವನ್ನು ಸ್ವೀಕರಿಸಿದರು. ಜಂಗಮಾರಾಧನೆ ನಡೆಯಿತು. ಮಠದ ಉತ್ತರಾಧಿಕಾರಿ ಚನ್ನಬಸವಣ್ಣ ದಂಪತಿಗಳನ್ನು ಕರೆದು, ಮಠದ ದಾಸೋಹಾದಿ ಮುಂದಿನ ಕರ್ತವ್ಯಗಳನ್ನು ತಿಳಿಸಿ, ಆಶೀರ್ವದಿಸಿದರು. ಪದ್ಮಾಸನಾ ಸೀನರಾಗಿ ಕುಳಿತು, ಇಷ್ಟಲಿಂಗದಲ್ಲಿ ದೃಷ್ಟಿಯಿರಿಸಿ ಲಿಂಗದೊಳಗಾದರು.

ಇಮ್ಮಡಿ ಶರಣಾರ್ಯರು:-ಆದ್ಯ ಶರಣಾರ್ಯರ ನಂತರ, ಉತ್ತರಾಧಿಕಾರಿಗಳಾದ ಚನ್ನಬಸವಣ್ಣನವರು ಇಮ್ಮಡಿ ಶರಣಾರ್ಯರೆಂದು ಪ್ರಸಿದ್ಧರಾದರು. ಆದ್ಯಗುರು ಶರಣಾರ್ಯರ ಗದ್ದುಗೆ ಕಟ್ಟಡವೂ ನಿರ್ಮಾಣವಾಯಿತು. ಮೂರನೆಯ ವರ್ಷವೇ ಮಹಾಮಹಿಮರಾದ ಆದ್ಯ ಶರಣಾರ್ಯರ ರಥೋತ್ಸವವು ಪ್ರಾರಂಭಿಸಲ್ಪಟ್ಟಿತು. ಕೆಲವು ವರ್ಷಗಳ ನಂತರ ಸಿದ್ಧಮ್ಮನವರ ಸಹೋದರಿ ಮುದ್ದಮ್ಮನವರೊಡನೆ ಇಮ್ಮಡಿ ಶರಣಾರ್ಯರ ಎರಡನೆ ವಿವಾಹವಾಯಿತು. ಇಬ್ಬರು ಮಡದಿಯರೂ ದಾಸೋಹ ಕಾರ್ಯದಲ್ಲಿ ನೆರವಾದರು.

ಮಠದ ಕೆಲಸಕಾರ್ಯಗಳು ದಿನೇ ದಿನೇ ವಿಸ್ತೃತಗೊಂಡವು-ಕವಿ ಮತ್ತು ಪಂಡಿತರಿಗೆ ಮಠ ಆಶ್ರಯವಿತ್ತಿತು. ಸಂಸ್ಕೃತ ಪಾಠಶಾಲೆ ಸ್ಥಾಪಿತವಾಯಿತು. ಭಕ್ತರಸಂಖ್ಯೆ ಹೆಚ್ಚುತ್ತಿದ್ದುದರಿಂದ ಮಠದ ಆವರಣದೊಳಗೆ ಭಕ್ತಾದಿಗಳಿಗೆ ವಸತಿಗೃಹಗಳೂ ನಿರ್ಮಾಣವಾದವು. ಸಂಸ್ಕೃತ ಪಾಠಶಾಲೆಯ ಆಚಾರ್ಯರಾದ ವೇ॥ ಸೂರಿ ವಿರೂಪಾಕ್ಷ ಕವಿಗಳಿಂದ ಕ್ಷೇತ್ರದ "ಶ್ರೀ ಶರಣಬಸವಪುರಾಣ" ರಚಿತವಾಯಿತು. (ಕ್ರಿ. ಶ. 1914).

ಶಾ. ಶ. ೧೮೩೯ (ಕ್ರಿ. ಶ. 1917)ರಲ್ಲಿ ಇಮ್ಮಡಿ ಶರಣಾರ್ಯರು ಶಿವಪೂಜೆ ಜಂಗಮಾರ್ಚನೆಯನಂತರ, ಬಂಧುವರ್ಗದ ಚನ್ನಬಸವಣ್ಣ ಎಂಬ ಯೋಜಿತ ಉತ್ತರಾಧಿಕಾರಿಗಳನ್ನು ತಮ್ಮ ಮಡದಿಯರನ್ನು ಕರೆದು ತಿಳುವಳಿಕೆ ಹೇಳಿ, ಆಶೀರ್ವದಿಸಿ, ಲಿಂಗೈಕ್ಯರಾದರು.

ಮುಮ್ಮಡಿ ಶರಣಾರ್ಯರು:- ಯೋಜಿತ ಉತ್ತರಾಧಿಕಾರಿಗಳಾದ ಬಾಲಕ ಚನ್ನಬಸವಣ್ಣನವರಿಗೆ ಮಾತೆಯರೇ ಮಾರ್ಗದರ್ಶಕರಾದರು, ಸಾಕಷ್ಟು ವಿದ್ಯಾಭ್ಯಾಸ ಪಡೆದನಂತರ, ಶಿವದೀಕ್ಷೆಹೊಂದಿ ತದಂಗವಾದ ವೀರಶೈವ ಧಾರ್ಮಿಕ ಶಿಕ್ಷಣದಿಂದ ಶಿವಾನುಭವ ಸಂಪತ್ತನ್ನು ಗಳಿಸಿದರು. ಮುಮ್ಮಡಿ ಶರಣಾರ್ಯರೆಂಬ ಅಭಿದಾನ ಹೊಂದಿ ಮಠದ ವ್ಯವಹಾರಗಳಲ್ಲಿ ದಕ್ಷತೆಯನ್ನು ಗಳಿಸಿದರು. ಪ್ರಾಪ್ತವಯಸ್ಕರಾಗಿ ಬಂಧುವರ್ಗದ ಚನ್ನಮ್ಮನವರನ್ನು ವಿವಾಹವಾದರು.



ಮುಮ್ಮಡಿ ಶರಣಾರ್ಯರು ದಾಸೋಹ, ಗುರುಲಿಂಗ ಜಂಗಮ ಸೇವೆ ಮತ್ತಷ್ಟು ಹೆಚ್ಚಿಸಿದರು ಅವರ ಕಾಲದಲ್ಲಿ ಪಂಡಿತರಿಗೆ, ದೀನನಾಥರಿಗೆ ಹೆಚ್ಚು ಆಶ್ರಯ ದೊರೆಯಿತು-ಶ್ರೀ ಶರಣಬಸವೇಶ್ವರ ಉನ್ನತ ಪ್ರಾಥಮಿಕ ಶಾಲೆ, ಪ್ರಸಾದ ನಿಲಯ, ಕ್ರಿ. ಶ 1931 ರಲ್ಲಿ ಶ್ರೀ ಶರಣಬಸವೇಶ್ವರ ವಿದ್ಯಾವರ್ಧಕ ಸಂಘ 1959 ರಲ್ಲಿ ಪ್ರಾರಂಭವಾದವು.

ಕ್ರಿ ಶ. 1938 ರಲ್ಲಿ ಚನ್ನಬಸವಣ್ಣನೆಂಬ ಪುತ್ರನ ಜನನವಾಯಿತು. ಕ್ರಿ, ಶ. 1943 ರಲ್ಲಿ ಮುಮ್ಮಡಿ ಶರಣಾರ್ಯರು ಲಿಂಗೈಕ್ಯರಾದರು.

ನಾಲ್ಮಡಿ ಶರಣಾರ್ಯರು:-ಬಾಲಕ ಚನ್ನಬಸವಣ್ಣನ ಶಿವದೀಕ್ಷಾದಿ ಧಾರ್ಮಿಕ ಸಂಸ್ಕಾರವನ್ನೂ ಕನ್ನಡ, ಸಂಸ್ಕೃತ ಭಾಷೆಗಳನ್ನೂ ಕ್ರಮೇಣ ಇಂಗ್ಲೀಷ್ ಭಾಷಾ ಶಿಕ್ಷಣವನ್ನೂ ಪಡೆದರು. ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ವಿಶೇಷ ಪಾಂಡಿತ್ಯವನ್ನು ಕವಿತಾ ಪ್ರತಿಭೆಯನ್ನು ಹೊಂದಿದ್ದರು. ಚಿಕ್ಕಂದಿನಿಂದಲೂ ತಮ್ಮ ಪರಂಪರೆಯ ದಾಸೋಹ ವೃತ್ತಿಯನ್ನೂ ಗುರುಲಿಂಗಜಂಗಮ ಸೇವೆಯನ್ನೂ ವಿಶೇಷ ಆಸಕ್ತಿಯಿಂದ ನಡೆಸುತ್ತಿದ್ದರು 1953 ರಲ್ಲಿ ಬಂಧುವರ್ಗದ ಪಾರ್ವತಮ್ಮನೆಂಬ ಕನ್ಯೆಯೊಡನೆ ವಿವಾಹ ನಡೆಯಿತು. ಶಿವಪೂಜೆಯಲ್ಲಿ ನಿಷ್ಠರಾಗಿದುದ್ದಲ್ಲದೆ, ಗ್ರಾಮಾಂತರದಲ್ಲಿ ಸಂಚರಿಸುವಲ್ಲಿ ಭಕ್ತರಿಗೆ ಧರ್ಮಾಚರಣೆ ಬಗ್ಗೆ ಸೂಕ್ತ ತಿಳುವಳಿಕೆ ನೀಡುತ್ತಿದ್ದರು. ಭಕ್ತರ ಮತ್ತು ಬಂಧುಗಳ ಇಚ್ಛೆಯಂತೆ ಎರಡನೆಯ ವಿವಾಹವೂ ನಡೆಯಿತು. ಮಠದ ಆಡಳಿತದಲ್ಲಿ ಸ್ಥಾಪಿತವಾದ ವಿದ್ಯಾ ಸಂಸ್ಥೆಗಳ ಅಭಿವೃದ್ಧಿಯಲ್ಲಿ ವಿಶೇಷ ಪರಿಶ್ರಮ ವಹಿಸುತ್ತಿದ್ದು, 1943ರಲ್ಲಿ ಲಿಂಗದೊಳಗಾದರು.

ಕಾನಾಮಡುವಿನ ಶರಣಾರ್ಯ ಸಂಪ್ರದಾಯದಲ್ಲಿ ಒಬ್ಬ ಪಟ್ಟಾಧಿಕಾರಿಗಳು ಮಠದಲ್ಲೇ ನೆಲಸಿ. ದಿನವೂ ತ್ರಿಕಾಲ ಪಾದೋದಕ ಪ್ರಸಾದವನ್ನು ಅನುಗ್ರಹಿಸುವ ಕ್ರಿಯಾಮೂರ್ತಿಯಾಗಿರುವರು. ಪ್ರಸ್ತುತದಲ್ಲಿ ಪಟ್ಟದ ಸೋಮೇಶ್ವರ ಶಿವಾಚಾರ್ಯರು ಕ್ರಿಯಾಮೂರ್ತಿಗಳಾಗಿರುವರಲ್ಲದೆ, ಉತ್ತರಾಧಿಕಾರಿಯಾಗಿರುವ ಚನ್ನಬಸವಸ್ವಾಮಿಗಳು ಶೈವಾವಸ್ಥೆಯಲ್ಲಿರುವುದರಿಂದ ಈಗಿನ ಕ್ರಿಯಾಮೂರ್ತಿಗಳೇ ಮಠದ ದಾಸೋಹ, ಗ್ರಾಮಾಂತರಗಳಿಂದ ಬರುವ ಧನದಾನ್ಯ ಸಂಗ್ರಹವಾರ್ಷಿಕ ರಥೋತ್ಸವ, ವಿಶೇಷ ಪೂಜಾ ಸಮಾರಂಭ, ಮಠದ ವ್ಯವಹಾರಗಳನ್ನು ದಕ್ಷತೆಯಿಂದ ನೆರವೇರಿಸುತ್ತಿರುವರು ಮಾತೆಯರು ಕಿರಿಯ ಸ್ವಾಮಿಯ ಪೋಷಣೆ, ಶಿಕ್ಷಣ ಮತ್ತು ದಾಸೋಹ ಕಾರ್ಯಗಳನ್ನು ನಡೆಸುವುದರಲ್ಲಿ ವಿಶೇಷ ಆಸಕ್ತರಾಗಿರುವರು

ಒಟ್ಟಿನಲ್ಲಿ ಕಾನಾಮಡುವಿನ ಶರಣಾರ್ಯ ಮಠವು ಸಹಸ್ರಾರು ಭಕ್ತಾದಿಗಳ ನಿತ್ಯಯಾತ್ರಾಕ್ಷೇತ್ರವಾಗಿ ಹೆಸರು ಪಡೆದು ಕನ್ನಡ ನಾಡಿನ ಹಿರಿಯ ಜಾಗೃತ ಸ್ಥಾನಗಳಲ್ಲಿ ಒಂದಾಗಿದೆ. ●

# ಬಸವರಸರ ಲೀಲೆಗಳು—5

ಹೆಚ್. ಜಿ. ರಾಧಾದೇವಿ.
ಗಂಜ್ ರಸ್ತೆ, ರಾಯಚೂರು.

ಅಂದಿನಿಂದ ಬಸವಣ್ಣ ಆ ಸಿದ್ಧಗುರುವಿನ ಗುಡುಸಿಲಿನಲ್ಲಿ ಸಾಕುಮಗನಾಗಿ ಬೆಳೆಯುತ್ತಾನೆ, ಕೂಡಲ ಸಂಗಮ ದೇವಾಲಯದ ಮುಖ್ಯ ಅರ್ಚಕ ಈ ಸಿದ್ಧ ಗುರು; ಚಿಕ್ಕಂದಿನಿಂದ ಸಂಗಮನಾಥನನ್ನು ಭಕ್ತಿಯಿಂದ ಪೂಜಿಸುತ್ತಿರುತ್ತಾನೆ, ಆಗ ಅವನ ಸ್ಥಿತಿ ಹೇಗೆಂದರೆ

ಕೈ ನಡುಗಿ....ಕಾಲುಡಗಿ ಸುವ್ವಲಾಲಿ
ಶಿವನ ಪೂಜೆ ಮಾಡಲಾರೆ ಸುವ್ವಲಾಲಿ
ಸ್ವರನಡುಗಿ ಧ್ವನಿಯಡಗಿ ಸುವ್ವಲಾಲಿ
ಶಿವನ ಸ್ತೋತ್ರ ಮಾಡಲಾರೆ ಸುವ್ವಲಾಲಿ

ಆದ್ದರಿಂದ ಮುಂಜಾನೆ ಪೂಜೆ ಮಾಡಿದರೆ ಬೆಳಗಿನೂಟ ಕೊಡವೆ ಸಂಜೆ ತನ್ನೆದುರು ಶಿವನ ಸ್ತೋತ್ರ ಮಾಡಿದರೆ ತನ್ನ ಗುಡಿಸಲಲ್ಲಿ ರಾತ್ರಿ ವಸತಿ ಕೊಡುವೆ ಎಂದು ಕರಾರು ಹಾಕುತ್ತಾನೆ.

ನಸುಕಿನಲ್ಲಿ ಎದ್ದು ನೀನು ಸುವ್ವಲಾಲಿ
ಶಿವನ ಪೂಜೆ ಮಾಡಿದರೆ ಸುವ್ವಲಾಲಿ
ಹಸಿದ ನಿನ್ನ ಹೊಟ್ಟೆಗೆ ಸುವ್ವಲಾಲಿ
ಅಶನ ಕೊಟ್ಟು ಸಲಹುವೆ ಸುವ್ವಲಾಲಿ

ರೋಗಿ ಬಯಸಿದ್ದು ಹಾಲು ಅನ್ನ....ವೈದ್ಯ ಹೇಳಿದ್ದು ಅದೇ ಎಂಬಂತೆ ಬಸವಣ್ಣನವರಿಗೆ ಪರಮಾನಂದವಾಯಿತು, ಅವರು ಅಲ್ಲಿರಲು ಒಪ್ಪಿಕೊಂಡರು.

ಮನದಣಿಯ ಶಿವನ ಪೂಜೆ ಸುವ್ವಲಾಲಿ
ಮಾಡಲೆಂದು ಮನೆಯ ತೊರೆದೆ ಸುವ್ವಲಾಲಿ
ಸ್ವರ ತಣಿಯೆ ಶಿವನ ಸ್ತೋತ್ರ ಸುವ್ವಲಾಲಿ
ಹಾಡಲೆಂದು ಮನೆಯ ತೊರೆದೆ ಸುವ್ವಲಾಲಿ

ಆದ್ದರಿಂದ ಅದೇ ತಮ್ಮ ಬದುಕೆಂದು ಬಸವಣ್ಣ ಹರ್ಷಿಸುತ್ತಾರೆ, ಆದರೆ ಮೊದಲನೆ ದಿನ ಶಿವಪೂಜೆ ಮಾಡಲು ಹೋದಾಗ ಸಂಗಮನಾಥನ ಲಿಂಗದ ಸುತ್ತಲು ಏಳೆಡೆಯ ಸಾಸಿರ ಹಾವು ಸುತ್ತಿಕೊಂಡಿದೆ,

ಫಣಿಯರತ್ನ ಹೊಳೆಯುತಿರಲು ಸುವ್ವಲಾಲಿ
ಹೆಣೆದು ಲಿಂಗ ಸುತ್ತಿತಯ್ಯ ಸುವ್ವಲಾಲಿ
ಮಣಿದು ನಮಿಸಿ ಬೇಡಲಾಗ ಸುವ್ವಲಾಲಿ
ಹೆಣೆದ ಹಾವು ಸಡಲಿತಯ್ಯ ಸುವ್ವಲಾಲಿ

ಆಗ ಬಸವಣ್ಣ ಸಂತಸದಿಂದ ಶಿವನ ಆಭರಣ ನೀನೆಂದು ಸ್ತುತಿಸಿ ಹಾಲು ಕುಡಿಸುತ್ತಾರೆ,

ಏಳು ಬಟ್ಟಲ ಹಾಲು....ಸುವ್ವಲಾಲಿ
ವಿೂಸಲಾಗಿ ಸಲಿಸೆ ಹಾವು ಸುವ್ವಲಾಲಿ
ಇಳಿದು ಲಿಂಗದಿಂದ ಹರಿದು ಸುವ್ವಲಾಲಿ
ತಿರುವಿನಲ್ಲಿ ಹರಿದು ಹೋಯ್ತು ಸುವ್ವಲಾಲಿ

ಶಿವಾಲಯವನ್ನೆಲ್ಲ ಮಡಿವಸ್ತ್ರದಿಂದ ಗುಡಿಸಿ ಒರೆಸಿ ಶುಭ್ರಮಾಡಿ ಅಭಿಷೇಕಕ್ಕೆ ಹರಿಯುವ ಹೊಳೆಯಿಂದ ನೀರು ತರುತ್ತಾರೆ, ಅಗ ಮತ್ತೊಂದು ವಿಚಿತ್ರ ನಡೆಯುತ್ತದೆ,

ಗಡಿಗೆ ನೀರಿನಲ್ಲಿ ಅದ್ದೆ ಸುವ್ವಲಾಲಿ
ಒಡನೆ ಮೊಸಳೆ ಹಿಡಿಯಿತಯ್ಯ ಸುವ್ವಲಾಲಿ
ವೃಷನ ಸ್ಮರಿಸಿ ಬೇಡಲಾಗ ಸುವ್ವಲಾಲಿ
ಹಿಡಿದ ಗಡಿಗೆ ಬಿಟ್ಟಿತಯ್ಯ ಸುವ್ವಲಾಲಿ

ಮೊಸಳೆಯಿಂದ ತಪ್ಪಿಸಿಕೊಂಡ ಕೂಡಲಸಂಗಮನ ಸ್ಮರಣೆ ಮಾಡುತ್ತ ಅಭಿಷೇಕದ ನೀರು ಗರ್ಭಗುಡಿಯಲ್ಲಿ ಇಡುತ್ತಾರೆ, ಅಗ ಸಿದ್ಧಗುರು ಮೆಚ್ಚಿಗೆ ಸೂಸಿ-

ಏಳು ಹೆಜ್ಜೆ ನಡೆದು ನೀನು ಸುವ್ವಲಾಲಿ
ಏಳು ಕಾಡು ಸುತ್ತಿಬಾರೊ ಸುವ್ವಲಾಲಿ
ಏಳು ಬುಟ್ಟಿ ಹೂವ್ವ ತಂದು ಸುವ್ವಲಾಲಿ
ಏಳು ಬಾರಿ ಅರ್ಚಿಸೊ ಸುವ್ವಲಾಲಿ



ಬಿಲ್ವದಳ, ಪುನ್ನಾಗ, ಕೇತಕಿ, ಚಂಪಕ, ಮಲ್ಲಿಗೆ ಎಲ್ಲವನ್ನು ಒಂದು ಥಳಿಗೆಯಲ್ಲಿ ಏಳು ಬುಟ್ಟಿ ತುಂಬಿ ತರುತ್ತಾರೆ, ಆದರೆ ಗುರು ಒಪ್ಪಲಿಲ್ಲ....

ಹನಿಯು ಸೋಕಿದ ಹೂವ್ವ ಸುವ್ವಲಾಲಿ
ಮುನಿದು ಬಿಸುಟರತ್ತ ಸುವ್ವಲಾಲಿ
ತೊನೆದು ತೂಗಿದ ಹೂವ ಸುವ್ವಲಾಲಿ
ಮುನಿದು ಬಿಸುಟರತ್ತ ಸುವ್ವಲಾಲಿ

ಗಾಳಿಗೆ ತೊನೆದಾಡಿದ ಹೂವು, ಇಬ್ಬನಿ ಸೋಕಿದ ಹೂವು ಸೂರ್ಯ ಕಿರಣ ತಾಗಿದ ಹೂವು....ದೆಸೆದೆಸೆಗೆ ಪರಿಮಳ ಚಾಚಿದ ಹೂವು ಎಂದು ಜಾಜಿ, ಕಣಗಲೆ, ಸಂಪಿಗೆ ಎಲ್ಲಾ ಬಿಸಾಟು ಬಿಡುತ್ತಾರೆ,

ಏಳು ಬುಟ್ಟಿ ಹೂವ ಬಿಸುಟು ಸುವ್ವಲಾಲಿ
ಏಳು ಬಿಲ್ವದಳ ವಿತ್ತರೆ ಸುವ್ವಲಾಲಿ
ಏಳು ಬಿಲ್ವದಳದಿಂದಲೆ ಸುವ್ವಲಾಲಿ
ಏಳು ನಾಮದ ಪೂಜೆ....ಸುವ್ವಲಾಲಿ

ಆ ಪೂಜೆಗೂ ಒಂದು ನಿಭಂದನೆ ಹಾಕುತ್ತಾರೆ, ಲಿಂಗವು ಒಂದು ಚೂರು ಕಾಣದಂತೆ ಏಳೇ ದಳದಲ್ಲಿ ಪೂಜಿಸಬೇಕು ಆ ಪರೀಕ್ಷೆಯಲ್ಲು ಬಸವಣ್ಣಾ ಗೆಲ್ಲುತ್ತಾ,

ಏಳೆದಳದಿಂದಲಿ ಸುವ್ವಲಾಲಿ
ಶಿವನ ಲಿಂಗ ಮುಚ್ಚಿತು ಸುವ್ವಲಾಲಿ
ಏಳು ನಾಮದಿಂದಲಿ ಸುವ್ವಲಾಲಿ
ಆಲಯವೇ ಹೊಳಲಾಯ್ತು ಸುವ್ವಲಾಲಿ

ಆಗ ಸಿದ್ಧಗುರು ಇನ್ನೊಂದು ಪರೀಕ್ಷೆ ಕೊಡುತ್ತಾನೆ ಏನೆಂದರೆ-

ಜೋರುಗಾಳಿ ಬೀಸಿದಾಗ ಸುವ್ವಲಾಲಿ
ಮೂರುದಳ ಉರುಳಿತು ಸುವ್ವಲಾಲಿ
ಬೀಸುಗಾಳಿ ಬೀಸಿದಾಗ ಸುವ್ವಲಾಲಿ
ಎರಡುದಳ ಉದುರಿತು ಸುವ್ವಲಾಲಿ

ಸಿದ್ಧಗುರುವಿನ ಮಾಯಾಗಾಳಿಯಿಂದ ಐದು ದಳವುರುಳಿದೆ, ಆ ದಿವ ಬಂದ ಊರ

ವರಿಗೆ ಶಿವಲಿಂಗ ಕಾಣಿಸಬಾರದೆಂದು ಹಾರಿದ ದಳ ಮತ್ತೆ ಮೇಲೇರಿ ಕುಳಿತು ಕೊಳ್ಳಲು ಸ್ತೋತ್ರ ಮಾಡಬೇಕೆಂದು ಆಜ್ಞೆ ವಿಧಿಸುತ್ತಾರೆ ಸಿದ್ಧಗುರು

ವ್ಯಾಘ್ರ ಚರ್ಮದಾರಿಯೆಂದು ಸುವ್ವಲಾಲಿ
ಶಿವನ ಭಜಿಸಿ ನಮಿಸಿದ ಸುವ್ವಲಾಲಿ
ಭಸ್ಮ ಭೂಷಿತನೆಂದು ಸುವ್ವಲಾಲಿ
ಹರನ ಭಜಿಸಿ ನಮಿಸಿದ ಸುವ್ವಲಾಲಿ

ನೂರೆಂಟು ನಾಮ ಸ್ತುತಿಸಿ ಮತ್ತೆ ಮತ್ತೆ ಪ್ರದಕ್ಷಿಣೆ ಹಾಕಿ ನಮಿಸಿದರೂ, ಹಾರಿದ ಹೂವು ಮತ್ತೆ ಮೇಲೇರಲಿಲ್ಲ, ಜನ ತಂಡ ತಂಡವಾಗಿ ಬರಲಾರಂಭಿಸಿದರು, ಬಸವ ಬೆದರಿದ, ಆದರೆ ಜನರಿಗೆ ಕಲ್ಲುಲಿಂಗ ಕಾಣಲಿಲ್ಲ ಬದಲಿಗೆ....

ವ್ಯಾಘ್ರ ಚರ್ಮದಭಾಗ ಸುವ್ವಲಾಲಿ
ಹೊಂದಿಸಿದಂತೆ ಕಂಡಿತು ಸುವ್ವಲಾಲಿ
ಭಸ್ಮ ಬಳಿದ ತೆರದಲ್ಲಿ ಸುವ್ವಲಾಲಿ
ಕೆಲವರಿಗೆ ಕಂಡಿತು ಸುವ್ವಲಾಲಿ

ಜನರು ಶಿವಲಿಂಗ ಅಲಂಕಾರ ಎಂದಿಗಿಂತ ಚೆಂದಾಗಿದೆಯೆಂದು ಗಂಗಾಧರನೆ ಇಳಿದು ಬಂದಂತಿದೆಯೆಂದು ಮಾತಾಡುತ್ತಿದ್ದಾರೆ,

ಗಂಗೆಯು ತಂದಿಟ್ಟಂತೆ ಸುವ್ವಲಾಲಿ
ಕೆಲವರಿಗೆ ಕಂಡೀತು ಸುವ್ವಲಾಲಿ
ಚಂದ್ರನ್ನ ತಂದಿಟ್ಟಂತೆ ಸುವ್ವಲಾಲಿ
ಕೆಲವರಿಗೆ ಕಂಡೀತು ಸುವ್ವಲಾಲಿ

ವಾಸ್ತವವಾಗಿ ಆ ದಿನ ಅಭಿಷೇಕ ಸಹ ಮಾಡಿಲ್ಲ, ಹೂವು ಸಹ ಪೂಜಿಸಿಲ್ಲ, ಪೂಜಿಸಿದ್ದು ಏಳು ಬಿಲ್ವದಳ....ಅದರಲ್ಲೂ ನಾಲ್ಕುದಳ ಹಾರಿ ಹೋಗಿದೆ, ಅಂಥ ಹುದರಲ್ಲಿ ಶಿವಲಿಂಗಕ್ಕೆ ತಾನೇ ತಾನಾಗಿ ಅಲಂಕರಿಸಿದಂತೆ ದಿವ್ಯಕಳೆ ಬಂದಿದೆ, ಜನರ ಕಣ್ಣಿಗೆ ಸಾಕ್ಷಾತ್ ಶಿವದರುಷನವಾಗಿದೆ, ಅಗ ಸಿದ್ಧಗುರು ಸಂತಸದಿಂದ ಬಸವಣ್ಣನ್ನಪ್ಪಿ-ಹೊಗಳುತ್ತಾರೆ,

ಶಿವನ ಪೂಜೆಗಾಗಿಯೆ ಸುವ್ವಲಾಲಿ
ಹುಟ್ಟಿ ಬಂದ ಭಕ್ತಿ ನೀನು ಸುವ್ವಲಾಲಿ
ಶಿವನ ಕೀರ್ತಿ ಸ್ತೋತ್ರಕಾಗಿ ಸುವ್ವಲಾಲಿ
ಹುಟ್ಟಬಂದ ಕಂದನೀನು ಸುವ್ವಲಾಲಿ





# ಅಂದಶ್ರದ್ಧೆಗಳು ಮೂಢನಂಬಿಕೆಗಳು

ಶ್ರೀ ಎಂ. ಬಿ. ಚನ್ನಬಸವ್ವ
1518, ಸುಂಕದಕಟ್ಟೆ, ಉತ್ತರ ವಿಸ್ತರಣ ವಿಭಾಗ, ಹಾಸನ.

ಎಲ್ಲಿಂದಲೋ ಬರುತ್ತದೆ, ಯಾರೋ ತಂದೊದಗಿಸುತ್ತಾರೆ, ಅನ್ನುವ ಭಾವನೆ ನಿರೀಕ್ಷೆಗಳೇ ಪೀಡೆ ಪಿಶಾಚಿಗಳು. ಜಗತ್ತಿನಲ್ಲಿ ಎಲ್ಲರಿಗೂ ಸಾಕಷ್ಟು ಬೇಕಾದಷ್ಟು ಇದೆ. ದೈವಬಲ ಕಾನೂನು ಬಲಗಳು ಇವೆಯೆಂಬೇ ಅಂತರ, ಅಭಾವ, ಪ್ರಭಾವ ದೈನ್ಯ, ದಾಸ್ಯ, ಆಶ್ರಯ, ಶರಣಾಗತಿ ಔದಾರ್ಯಗಳು.

ಸೂರ್ಯೋದಯವಾದೊಡನೆ ಮಂಜಿನ ಪರ್ವತ ಕರಗತೊಡಗುತ್ತದೆ. ಎಲ್ಲಿಂದಲೂ ಬರುವುದಿಲ್ಲ, ಯಾರೂ ತಂದೊದಗಿಸುವುದಿಲ್ಲ, ಅನ್ನುವುದನ್ನು ಅರ್ಥ ಮಾಡಿಕೊಂಡು, ಅಂತಹ ಪರಿಸ್ಥಿತಿಗೆ ನಮ್ಮನ್ನೂ ಹೊಂದಿಸಿಕೊಂಡರೆ ಅಂತಿಮ ಮುಕ್ತಿ ಶಾಶ್ವತ ಪರಿಹಾರ ನೈಜ ಬಿಡುಗಡೆ.

ಪ್ರಪಂಚವನ್ನು ಮಾಯೆ ಅನ್ನುತ್ತಾರೆ. ಹೇಗೆ ಅದು ಮೋಸ ಅನ್ನುವುದಕ್ಕೆ ಭೌತಿಕ ಆಧ್ಯಾತ್ಮಿಕ ಕಾಫಿರರು ಆಸ್ತಿಕರು ಸಂದೇಹಿಗಳು ಚಾರ್ವಾಕರು ಬಗೆಬಗೆಯಾಗಿ ಅರ್ಥ ವಿವರಣೆಗಳನ್ನು ಮಂಡಿಸುತ್ತಾರೆ. ಅದೇ ಸರಿಯೆಂದು ನಂಬಿಸಿ ಬಿಂಬಿಸಲು ಹಾಸುಹೊಕ್ಕು ಹೊಂಚುಸಂಚು ಸಾಗಿಸುತ್ತಾರೆ.

ಎಲ್ಲರೂ ನಂಬಲೆಳ್ಸಿಸುತ್ತಾರೆ. ಹಾಗೆ ನಂಬುವುದರಿಂದ ಇಹಪರಸೌಖ್ಯ ಸಹಾಯ ಅನುಕೂಲಗಳು ದೊರೆಯುವ ಸಾಧ್ಯತೆಗಳು ನಳನಳಿಸಿ ಆಹ್ವಾನಿಸುತ್ತವೆ. ಕಷ್ಟವಿಲ್ಲದೆ ಕಡಿಮೆ ಬೆಲೆಗೆ ಸುಲಭವಾಗಿ ತಾನಾಗಿ ಮನೆ ಬಾಗಿಲಿಗೆ ಬಂದು ಒದಗುವುದಾದರೆ ಯಾರಿಗೆ ಬೇಡ!

ಆಶಿಸಿದೊಡನೆ ಲಭಿಸುವ ಸಂಭವ! ಇದೇ ಪಾಪತಾಪ ಮೂಲ. ತಾನಾಗಿ ತಟ್ಟನೆ ಬಂದು ಬಿದ್ದರೆ ಲೇಸು. ಅದು ಸಾಧ್ಯವಿಲ್ಲದಿದ್ದರೆ ಕೊಂಚ ಕಷ್ಟಪಡಲು ಒಂದಿಷ್ಟು ಬೆಲೆ ಸಲ್ಲಿಸಲು ಸಿದ್ಧ. ಆದರೆ ಪೂರ್ಣ ಕಷ್ಟಪಡಲು ಸಂಪೂರ್ಣ ಬೆಲೆಯನ್ನು ನಗದು ಕೊಡಬೇಕೆಂದರೆ ? ಯಾರೂ ಸಿದ್ಧರಿಲ್ಲ ! ಅದರಲ್ಲೇನು ಮಹ ? ಹತ್ತು ಮಂಕರಿ ಮರಳನ್ನು ಹೊಳೆಯಿಂದ ಹೊತ್ತು ತರಬೇಕು. ಒಂದು ಗಾಡಿ ದೊರಕಿದರೆ ಎಷ್ಟೊ ಸಹಾಯ ಪರಿಹಾರ. ತೆರಿಗೆಯಿಂದ ತನಗೆ ವಿನಾಯಿತಿ ದೊರೆತರೆ ? ತನ್ನ ಮಗನಿಗೆ ವಿದ್ಯಾರ್ಥಿ ವೇತನ ಲಭಿಸಿದರೆ.

ಎಲ್ಲಿಯ ವರೆಗೆ ಲಭಿಸುವುದು, ದೊರೆಯುವುದು, ಅನ್ನುವಂತಹದು ಇರುತ್ತದೆಯೋ ಅಲ್ಲಿಯ ವರೆಗೆ, ಆಶಾಪಾಶಾ ಮೋಹಾಜಾಲ ವಂಚನೆಯ ಹಂದರ ಯಕ್ಷಿಣಿ, ಮೋಹಿನಿ, ಪವಾಡ, ಜಾದೂಗಾರಿಕೆಗಳಿಗೆ ಬೆಲೆನೆಲೆಗಳು ಇದ್ದೇಯಿರುತ್ತವೆ. ಬಲಿಪಶುಗಳು ಕ್ಯೂ ಕಟ್ಟಿ ನಿಂತಿರುತ್ತಾರೆ.

ಪೂರ್ಣಫಲ ದೊರಕಬೇಕಾದರೆ ಪೂರ್ಣಶ್ರಮ ಹಾಕಲೇಬೇಕು. ಅದಕ್ಕೆ ವಿನಾಯಿತಿ ರಿಯಾಯಿತಿ ಸೋಡಿ ಡಿಸ್‌ಕೌಂಟ್ ಇರುವುದೆಂದರೆ ಅದೇ ಅನೀತಿ ಅನ್ಯಾಯ, ದುರಾಚಾರ, ಭ್ರಷ್ಟಾಚಾರ, ಮೂಲ. ಇವು ಇವೆಯೆಂದೇ ನುಣುಚಿಕೊಳ್ಳುವುದು ತಪ್ಪಿಸಿಕೊಳ್ಳುವುದು ಇದೆಲ್ಲ ಇವೆ.

ಎಲ್ಲಿಂದಲೋ ತಂದು ಕೊಡುವರು ಯಾರಿಂದಲೋ ಕೊಡಿಸುವವರು ! ರಾಜಕಾರಣ ಸಮಾಜಸೇವೆ ಪತಿತೋದ್ಧಾರಗಳೆಂದರೆ ಇಂತಹವರೇ ಇಂತಹದೆ. ಜಗತ್ತಿನ ಅಂಗರಚನೆ ನಂಬಿಕೆಗಳ ಹಾಸುಹೊಕ್ಕು ವ್ಯವಸ್ಥೆಯು ಆಧಾರ ಹೀಗೆಲ್ಲ ಹಬ್ಬಿ ಪಸರಿಸಿಕೊಂಡಿದೆ.

### ಸೋಮಾರಿತನವೇ ದೈವತ್ವ, ದುಡಿಮೆ ಅನ್ನುವುದು ಸೈತಾನಿ

ಮಹಾನುಭಾವರು ಪವಾಡಪುರುಷರು ಹುದ್ದೆಗದ್ದುಗೆಗಳು ಅಧಿಕಾರ ಪೀಠಗಳು ದೈವೀಶಕ್ತಿಗಳು ಮಾಂತ್ರಿಕ ಯುಕ್ತಿಗಳು ಇಂತಹವಕ್ಕೆ ಜನಮಾನಸದಲ್ಲಿ ಅನಂತ ಸ್ವಾಗತ. ಪುಕ್ಕಟೆ ದೊರೆಯಲಿರುವಾಗ ನಂಬದ ಹುಂಬರೂ ಕೂಡ ಬಾಯಿ ಬಾಯಿ ಬಿಡುತ್ತಾರೆ.

ಇದುವರೆಗಿನ ಪ್ರಪಂಚ ಹಾಗೂ ಅದರ ಹಾಸುಹೊಕ್ಕು ನಂಬಿಕೆ ಗಳೆಂದರೆ ದುಡಿಮೆಯೇ ದೈವ, ಕಾಯಕವೇ ಕೈಲಾಸ ಸೋಮಾರಿಯ ಮನಸ್ಸು ಪಾಪದ ಕಾರ್ಖಾನೆ, ಜ್ಞಾನಕ್ಕೆ ಸಮಾನವಾದುದು ಯಾವುದೂ ಇಲ್ಲ, ವಿದ್ಯೆಯಿಲ್ಲದವ ಹದ್ದಿಗಿಂತ ಕಡೆ, ಜ್ಞಾನವೇ ಬೆಳಕು. ಮೂಢನಂಬಿಕೆ ಅಂಧಶ್ರದ್ಧೆಗಳೆಂದರೆ ಇವೆ. ಇಂತಹವೇ ಇದುವರೆವಿಗಿನ ಜಗತ್ತನ್ನು ಹಿಡಿದು ಕಟ್ಟಿಟ್ಟಿರುವ ಶಕ್ತಿಗಳೆಂದರೆ, ಬುದ್ಧಿ ಜ್ಞಾನ ಹಣ ಹರೆಯ ಅಧಿಕಾರ ಕಾನೂನು ದೈವಮಂತ್ರಬಲದಿಂದ. ಪುಡಿಸುವುದು ಸಾಲ ಕೊಡುವುದು ಹಿಡಿತದಲ್ಲಿ ಇಟ್ಟುಕೊಳ್ಳುವುದು, ಹಂಗು ದಾಕ್ಷಿಣ್ಯಗಳಲ್ಲಿ ಕರುಣೆ ಔದಾರ್ಯಗಳಲ್ಲಿ ಕೊಯ್ಯುವುದು.

ಮನೆಯ ಸುತ್ತ ಎರಡೆಕರೆ ಭೂಮಿ. ಹಿತ್ತಿಲಿನಲ್ಲಿ ಎರಡು ಹಲಸಿನಮರ ಎರಡು ಮಾವಿನಮರ ನಾಲ್ಕು ತೆಂಗಿನಮರ ಬಚ್ಚಲುನೀರು ಹರಿಯುವೆಡೆಯಲ್ಲಿ ಬಾಳೆತೋಟ ಅಡಿಕೆ ವೀಳ್ಯೆಯದೆಲೆ, ಬೇಲಿಯಲ್ಲಿ ಅನಾನಸ್ ಮಾದಳನಿಂಬೆ ಚಕ್ಕೋತ ಕಿತ್ತಳೆ ಸೇಬು ಇತ್ಯಾದಿ.



ಹತ್ತಾರು ಪರಂಗಿ ಹಣ್ಣಿನ ಗಿಡಗಳು ತರಕಾರಿ ಹಣ್ಣು ಹಂಪಲು ಬಳ್ಳಿ ಸೊಪ್ಪು ಮಾವಿನಮರದಡಿಯಲ್ಲಿ ಕೊಟ್ಟಿಗೆ ದನಕರು ಆಡು ಕುರಿ, ಹಲಸಿನ ಮರದಡಿಯಲ್ಲಿ ಕೋಳಿಮೊಟ್ಟಿಗೂಡು. ಜಗತ್ತಿನ ಆಯಾಯ ಪರಿಸರ ವಾತಾವರಣದಲ್ಲಿನ ಸಾಕುಪ್ರಾಣಿ ಸಸ್ಯಸಂಪತ್ತು

ಜೊತೆಗೆ 12 ಚೀಲ ಧಾನ್ಯ ಬರುವ ಹೊಲ, ಗದ್ದೆ, ತೋಟ, ಭೂಮಿ, ಎರಡೆಕರೆ ಭೂಮಿ ಜಗತ್ತಿನಲ್ಲಿ ಪ್ರತಿ ಕುಟುಂಬಕ್ಕೂ ದೊರೆಯಲು ಧಾರಾಳ ಸಾಧ್ಯತೆ ಅವಕಾಶವಿದೆ. ಪ್ರತಿ ಕುಟುಂಬಕ್ಕೂ ಎರಡೆಕರೆ ಭೂಮಿಯಿದ್ದರೆ ಎರಡು ಮನೆಗಳ ಮಧ್ಯೆ ಹೊಲ, ಗದ್ದೆ, ತೋಟ ಹಿತ್ತಲಿದ್ದರೆ !

ಇಂತಹ ಪರಿಸ್ಥಿತಿಯನು ಕಲ್ಪಿಸಿಕೊಳ್ಳಿ. ಪ್ರತಿ ಮನೆಯಲ್ಲೂ ಕುರಿ ಕೋಳಿ ಹಾಲು ಮೊಸರು ಬೆಣ್ಣೆ ತುಪ್ಪ ಹಿತ್ತಲಿನಲ್ಲಿ ಹಣ್ಣು ತರಕಾರಿ. ಬಾಳೆಯ ಗೊನೆ ತೆಂಗಿನಕಾಯಿ ಹಲಸಿನಹಣ್ಣು ಮಾವಿನಹಣ್ಣು ಬೇಕೆನಿಸಿದಾಗ ಬಿಡುವಾಗಲೆಲ್ಲ ಬೇಟೆ ಮೀನು ಜೇನು.

ಬಿಡುವು? ಆಗ ಜಗತ್ತಿನಲ್ಲಿ ಕೆಲಸವೇ ಇಲ್ಲ. ಬಡತನ ದುಡಿಮೆ ಹಸಿವು ಕಷ್ಟ ನಷ್ಟ ನೋವು ಸಂಕಟ ಅನ್ನುವಂತಹವು ಅಂತಹ ವಾತಾವರಣಕ್ಕೆ ಗೊತ್ತೇಯಿರುವುದಿಲ್ಲ! ಹಿಂದೊಮ್ಮೆ 'ಇತ್ತು' ಜಗತ್ತಿನಲ್ಲಿ ಜನ ಅನ್ನಕ್ಕಾಗಿ ಕಷ್ಟ ಪಡುತ್ತಿದ್ದರು, ದುಡಿಸುದ್ದರು. ಅನ್ನುವುದನ್ನು ಆಗ ಜನ ನಂಬುವುದೇ ಇಲ್ಲ. ದುಡಿಯಬೇಕು ಕಷ್ಟಪಡಬೇಕು ಬೆವರು ಸುರಿಸಬೇಕು ಬಂಡವಾಳ ಬಡ್ಡಿ ಬಾಡಿಗೆ ದಲ್ಲಾಳಿ ಲಾಭ ವಿಮೆ ಡಿವಿಡೆಂಟ್ ಬೋನಸ್ ಇನ್‌ಸೆಂಟೀವ್ ಅವಾರ್ಡ್ ಅನ್ನುವಂತ ಶಬ್ದಗಳನ್ನು ಆಗಿನ ಜನ ಅರ್ಥ ಮಾಡಿಕೊಳ್ಳಲಾರರು.

### ಕಾಯಕದಿಂದ ಕೇಡ, ನಾಯಕನಿಂದ ಶೋಷಣೆ

ಮನೆಮುಂದಿಯೆಲ್ಲ ತಿಂದುಂಡು ಉಬ್ಬಿಕೊಬ್ಬುತ್ತಾರೆ. ಸುಮ್ಮನೆ ಕುಳಿತಿರುವುದು ಮಾನವ ಸ್ವಭಾವವಲ್ಲ. ಬೇಸರ ಕಳೆಯಲು ಏನಾದರೂ ಮಾಡಬೇಕಾಗುತ್ತದೆ, ಆಡಬೇಕಾಗುತ್ತದೆ ಮಳೆಬಂದಾಗ ಉತ್ತಿಬಿತ್ತಿ ಬೆಳೆಯುತ್ತಾನೆ. ಅದು ಕೆಲಸ ದುಡಿಮೆ ಬೆವರು ಅಲ್ಲ! ಹನ್ನೆರಡು ಚೀಲ ಬೆಳೆಯಲು ಮನೆಮುಂದಿಯೆಲ್ಲ ಎಷ್ಟು ಶ್ರಮಿಸಬೇಕಾದೀತು! ಈವತ್ತಿನ ಪ್ರಪಂಚದ ದುಡಿಮೆ ಶ್ರಮ ಬೆವರು ನೆತ್ತರಿನ ಅರ್ಥವ್ಯಾಪ್ತಿಯಲ್ಲಿ ಅದು ದುಡಿಮೆಯೇ ಅಲ್ಲ! ಆಟ ಕೇವಲ ಚೆಲ್ಲು ಸಂತೋಷ ಸಂಭ್ರಮ ಸಂಗೀತ ಮಾತ್ರ.

ಕೆಲಸದಿಂದ ಕಲ್ಯಾಣ ! ವೆಂದು ಹೇಳುತ್ತದೆಯೆಂದೇ ಜಗತ್ತು ಮಾಯೆ ಮೋಸ. ಇದುವರೆಗಿನ ಜಗತ್ತು ಹೇಳುತ್ತಿದೆ, ಉದ್ಯೋಗಂ ಪುರುಷ ಲಕ್ಷಣಂ.ಉದರಂಭರ

ಣಕ್ಕೆ ಹೊಟ್ಟೆಪಾಡಿಗಾಗಿ ಅನ್ನಕ್ಕಾಗಿ ಏನಾದರೂ ಮಾಡು ಹುದ್ದೆ ಉದ್ಯೋಗ ವೃತ್ತಿ ತಪ್ಪು ದುಡಿತ ಅನ್ನುವುದು ದೆವ್ವ. ದುಡಿತದಿಂದ ಕಾಡು ನಾಶವಾಗುತ್ತದೆ, ಗಿಡಸಸ್ಯ ಸಂಪತ್ತು ಕ್ಷೀಣಿಸುತ್ತದೆ, ನೀರು ಹವೆ ವಾತಾವರಣ ಮಲಿನಗೊಳ್ಳುತ್ತವೆ. ಅಭಾವ ಪ್ರಭಾವ ಅನ್ಯಾಯ ಆಕ್ರೋಶ ಅಕ್ರಮ ಸಂಗ್ರಹಣ ಪ್ರವೃತ್ತಿ ದಾಹ ದೈನ್ಯ ಕೋಪತಾಪಗಳು.

ಸೋಮಾರಿಯ ಮನಸ್ಸು ಪಾಪದ ಕಾರ್ಖಾನೆ! ಅನ್ನುವುದು ಇದುವರೆಗಿನ ಪ್ರಪಂಚದ ಗೀಳುಚಾಳಿ. ಆ ಮೂರ್ಖ ಕಲ್ಪನೆಯನ್ನು ಬುಡಸಹಿತ ಕಿತ್ತುಹಾಕಬೇಕು. ಸೋಮಾರಿಯಾಗಿದ್ದರೆ ಕಾಡು ಬೆಳೆಯುತ್ತದೆ, ಹಾಡಾಡಿಕೊಂಡು ಉಣ್ಣಬಹುದು. ಹಾಲು ಜೇನು.

ಗಿಡ ವೃಕ್ಷಗಳನ್ನು ಕತ್ತರಿಸಿದರೆ ಹೃನ್ಮನಗಳನ್ನು ಮಲಿನಗೊಳಿಸಿದಂತೆ. ಗಿಡ ವೃಕ್ಷ ಸಸ್ಯ ಸಂಪತ್ತು ಅದೇ ಬದುಕು ಜೀವನ. ಕಣ್ಣಿಗೆ ಇಂಪು ಹೊಟ್ಟೆಗೆ ಅನ್ನ. ವೃಕ್ಷ ಸಂಪತ್ತಿನಲ್ಲಿ ಪಶುಪಕ್ಷಿ ಸಿರಿ ಸೌಖ್ಯ! ಭೂಮಿಯಲ್ಲಿ ಅನ್ನ, ನೀರಿನಲ್ಲಿ ಮೀನು! ಅನ್ನವೇ ಅನ್ನ!

ಭೂಮಿ ಜಗನ್ಮಾತೆ. ಪಶುಪಕ್ಷಿಗಳನ್ನು ಕಾಪಾಡುತ್ತಿರುವ ಆಕೆ ಮನುಕುಲವನ್ನು ಸಾಕಬಲ್ಲಳು ನಾನು ದುಡಿದು ತಿನ್ನುತ್ತೇನೆ ಅನ್ನುವುದೇ ಪರಮ ಮೂರ್ಖತನ ಅದರಂತಹ ಅಂಧಶ್ರದ್ಧೆ ಮೂಢನಂಬಿಕೆ ಅದೆ! ಅದರಿಂದ ಹಾಳುಬೀಳಾಗಿದೆ ಹೃನ್ಮನವೆಲ್ಲ.

ಸಂಪಾದನೆ ಅನ್ನುವುದು ಸಾವು, ಸುಲಭ ಸಂಪಾದನೆ ಅನ್ನುವುದು ದುರ್ಮರಣ. ಸಂಪಾದನೆ ಸಂಶೋಧನೆ ಸೃಷ್ಟಿಸುವುದು ಉತ್ಪಾದನೆ ಅನ್ನುವಂತಹದೆಲ್ಲ, ತನ್ನನ್ನು ಮೋಸಗೊಳಿಸಿಕೊಳ್ಳಲು ತಾನೇ ನಿರ್ಮಿಸಿಕೊಂಡಿರುವ ಆತ್ಮವಂಚನೆಯ ಮೋಹಜಾಲ ಹಂದರವಷ್ಟೆ.

ಮನುಕುಲದ ಮೂರ್ಖತೆ ಇಬ್ಬಗೆಯಲ್ಲಿ ರಣರಣಿಸುತ್ತ ಬಂದಿದೆ: ಗಿಡವೃಕ್ಷಗಳನ್ನು ಕಡಿಯುವುದು, ಮನೆಯ ಪಕ್ಕದಲ್ಲಿ ಮನೆಯನ್ನು ಕಟ್ಟುವುದು. ಮೊದಲಯನದರಿಂದ ನೋಡುವುದೆಲ್ಲ ಬೋಳು ಬೀಳು ಹಾಳು, ಎರಡನೆಯದರಿಂದ ಚರಂಡಿ ದುರ್ಗಂಧ ಬಂದರಿಂದ ಮನಸ್ಸು ಸೊರಗುತ್ತದೆ. ಎರಡನೆಯದರಿಂದ ದೇಹವೋ ಏನೂ ಮಾಡಬೇಡ, ಎಲ್ಲವೂ ಸಿಕ್ಕುತ್ತದೆ! ಏನಾದರೂ ಮಾಡಹೊರಟರೆ ಏನೂ ಸಿಕ್ಕುವುದಿಲ್ಲ–ಅಭಾವ ಪ್ರಭಾವಗಳ ಲೈಸೆನ್ಸ್ ಪರ್ಮಿಟ್ ಪತಿತೋದ್ಧಾರ ಬಡತನ ಅಂತರ ನಿವಾರಣೆಯ ರಾಜ್ಯವಾಗುತ್ತದೆ. ನಾಯಕ ಅಧಿಕಾರಿ ಮಂತ್ರಿ ಮಾಂತ್ರಿಕರ ಕೈಗೆ ನಿನ್ನ ಕುತ್ತಿಗೆ ಸಿಕ್ಕಿಕೊಳ್ಳುತ್ತದೆ. ನೀನೀಗ ಬಂಧಿ ಅಪರಾಧಿ.

(ಮುಂದಿನ ಸಂಚಿಕೆ ನೋಡಿ)



# ಜ್ವರ: ಆರೋಗ್ಯದ ಲಕ್ಷಣವೂ ಆಗಬಹುದಲ್ಲವೆ ?

—ಪ. ರಾಮಕೃಷ್ಣ ಶಾಸ್ತ್ರಿ,
"ಶಿವಶಕ್ತಿ ನಿಲಯ" ಅಂಚೆ: ಮಚ್ಚಿನ-574295 (ದ.ಕ)

"ಜ್ವರ"ಎಂದೊಡನೆ ಅದೊಂದು ಶರೀರದ ಹಾನಿಕಾರಕ ಪೀಡೆಯೆಂದೇ ಅನೇಕರ ಭಾವನೆ. ಆದರೆ ಶರೀರದ ಆರೋಗ್ಯ ಚೆನ್ನಾಗಿರುವುದರ ಕುರುಹು ಅದೆನ್ನುತ್ತಾರೆ ತಜ್ಞರು. ನಮ್ಮ ಮೆದುಳಿನಲ್ಲಿರುವ ಹೆಬ್ಬೆರಳಿನ ಗಾತ್ರದ ಥರ್ಮೋಸ್ಟಾಟ್ ಎಂಬ ನರಸಮೂಹ ದೇಹದ ರಕ್ತದ ಒತ್ತಡ, ನಿದ್ರೆ, ಹಸಿವು, ಭಾವನೆಯ ಏರುಪೇರುಗಳನ್ನು ನಿಯಂತ್ರಣದಲ್ಲಿರಿಸಿಕೊಳ್ಳುತ್ತದೆ. ಈ ಅಂಗಕ್ಕೆ ಸ್ವಲ್ಪವಾದರೂ ಧಕ್ಕೆ ಬಂದರೂ ಸಾಕು, ಸಾವು ಕೂಡಲೇ ಬರುವುದು. ನೀವು ೭೦ ಡಿಗ್ರಿಗಿಂತ ಕಡಿಮೆ ಉಷ್ಣತೆಯಿರುವ ಕೋಣೆಗೆ ಹೋದಾಗ ಶರೀರವನ್ನು ತಣ್ಣನೆಯ ಗಾಳಿ ಸ್ಪರ್ಶಿಸುತ್ತವೆ. ಆ ಕೂಡಲೇ ಥರ್ಮೋಸ್ಟಾಟ್ ಸ್ನಾಯುಗಳನ್ನು ಆಕುಂಚನಗೊಳಿಸಿ, ಶರೀರದ ಬಿಸಿಏರುವಂತೆ ಮಾಡುತ್ತದೆ. ಸೆಕೆಯಾದಾಗ ಬೆವರಿನ ಗ್ರಂಥಗಳನ್ನು ಹೆಚ್ಚಾಗಿ ದುಡಿಸಿ ತಣ್ಣಗಿನ ಪರಿಸರ ತರುತ್ತದೆ.

ಶರೀರಕ್ಕೆ ರೋಗಾಣುಗಳ ಸಂಪರ್ಕವಾದಾಗ ಅದನ್ನು ಪ್ರತಿಭಟಿಸಲು ಥರ್ಮೋಸ್ಟಾಟ್ ಕೈಗೊಳ್ಳುವಂತೆ ಉಪಾಯವೇ ಜ್ವರ. ಹಲವು ರೀತಿಯ ರೋಗಗಳು ಬಂದಾಗ ಅದನ್ನು ನಿವಾರಿಸಲು ಕೃತ್ರಿಮ ಜ್ವರಬರಿಸುವುದೂ ಉಂಟು. ಶರೀರದಲ್ಲಿ ಏನಾದರೂ ಹುಣ್ಣು ಉಂಟಾದಾಗ ಅದರ ವಿಷ ಅಣುಗಳು ಮೆದುಳಿನೆಡೆಗೆ ಧಾವಿಸತೊಡಗುತ್ತವೆ, ಆಗ ಅದು ಆ ಅಣುಗಳನ್ನು ನಾಶ ಮಾಡಲು ಇಡೀ ಶರೀರವನ್ನು ಜ್ವರ ಎಂಬ ಕಾವಿನಿಂದ ಕುದಿಸತೊಡಗುತ್ತದೆ. ಇಂತಹ ಉಷ್ಣತೆಯಲ್ಲಿ ಹಲವು ಜಾತಿಯ ರೋಗಾಣುಗಳು ಬದುಕುವುದಿಲ್ಲ. ಕೆಲವು ಸಾಯದಿದ್ದರೂ ನಿತ್ರಾಣಹೊಂದುತ್ತವೆ. ಆಗ ರಕ್ತದಲ್ಲಿರುವ ಬಿಳಿಯ ಕಣಗಳು ಅವುಗಳನ್ನು ಹೊಡೆದೋಡಿಸಲು ಸಶಕ್ತವಾಗುತ್ತವೆ. ಈ ಹೋರಾಟ ನಡೆಯುವಾಗ ಉತ್ಪನ್ನವಾಗುವಂಥ ಪೈರೋಜನ್ ಎಂಬ ರಾಸಾಯನಿಕವು ಮೆದುಳಿನ ಹೈಪೋಥಲಾಮಸ್ ಗ್ರಂಥಿಯ ಮೇಲೆ ಬೀರುವ ಪರಿಣಾಮವು ಜ್ವರ ಇನ್ನಷ್ಟು ಏರಲು ಕಾರಣವಾಗುತ್ತದೆ.

ಸಿಫಿಲಿಸ್, ಗನೋರಿಯ ಮೊದಲಾದ ಭಯಂಕರ ಲೈಂಗಿಕ ರೋಗಗಳೂ ಸಂಧಿವಾತ, ಹೃದಯ ವಿಕಾರ ಮುಂತಾದ ವ್ಯಾಧಿಗಳಿರುವವರಿಗೆ ಮಲೇರಿಯ ಟೈಫಾಯಿಡ್ ಜ್ವರ ಬರುವ ವ್ಯಾಕ್ಸಿನೇಶನ್‌ಗಳನ್ನು ಚುಚ್ಚುತ್ತಾರೆ. ಪೆನಿಸಿಲಿನ್‌ನಂತಹ

ಆಂಟಿಬಯೋಟಿಕ್‌ಗಳಿಂದ ಸಿಗದ ಸತ್ಪರಿಣಾಮ ಅದರಿಂದ ಆಗುತ್ತದೆ. ಜ್ವರದ ಕಾವು ಏರಿ ಶೇ. ಲಕ್ಷರಷ್ಟು ರೋಗಿಗಳ ಮೈಯಿಂದ ರೋಗಾಣುಗಳು ನಾಶವಾಗಿ ಅವರು ಸಂಪೂರ್ಣ ರೋಗಮುಕ್ತರಾದರು. ಪೆನಿಸಿಲಿನ್ ಕೂಡ ಶರೀರದಲ್ಲಿ ಜ್ವರ ವಿರುವಾಗಲೇ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ. ನೊಬೆಲ್ ಪ್ರಶಸ್ತಿ ವಿಜೇತ ಡಾ|| ಜೂಲಿಯನ್ ವೆಗ್ನರ್ ಈ ಶತಮಾನದ ಆರಂಭದಲ್ಲಿ ಮಾಡಿದ ಶೋಧವಿದು.

ದೇಹಕ್ಕೆ ಹೊಂದಿಕೆಯಾಗದ ರಾಸಾಯನಿಕ ದ್ರವ್ಯಗಳು, ಕೆಲವೊಂದು ಔಷಧಿ ಗಳ ಅತಿಯಾದ ಸೇವನೆಯೂ ಜ್ವರವನ್ನು ತರಬಲ್ಲವು. ಇವು ರಕ್ತದೊಡನೆ ಸೇರಿ ಕೊಂಡು ಮೆದುಳಿನೆಡೆಗೆ ಹರಿದು ಹೋಗುವಾಗ ಅಲ್ಲಿ ದೇಹವನ್ನು ರಕ್ಷಿಸಲು ಕಟಿ ಬದ್ಧವಾಗಿರುವ ಕೋಶಗಳು ಇಡೀ ದೇಹದಲ್ಲಿ ಉಷ್ಣತೆಯನ್ನುಂಟು ಮಾಡುತ್ತವೆ. ಅದರಿಂದಾಗಿ ಶರೀರದಿಂದ ಹೊರಬೀಳುವ ಉಷ್ಣತೆಯ ದಾರಿಗಳು ಮುಚ್ಚಿಕೊಳ್ಳು ತ್ತವೆ. ಚರ್ಮವು ಒಣಗುತ್ತದೆ. ಉಷ್ಣತೆ ಏರಿದಂತೆ ರಕ್ತಸಂಚಾರದ ವೇಗವೂ ಹೆಚ್ಚಾಗುತ್ತದೆ.

ಈ ಹೊತ್ತಿನಲ್ಲಿ ವಿಷ ರಾಸಾಯನಿಕಗಳು ಹಾಳುಗೆಡವಿದ ದೇಹದ ಕೋಶ ಗಳನ್ನು ತ್ವರಿತ ಗತಿಯಿಂದ ಹೊರಗೆ ದಬ್ಬಿ, ಅಲ್ಲಿ ಹೊಸ ಕೋಶಗಳನ್ನು ಸ್ಥಾಪಿಸುವ ಕಾರ್ಯ ನಡೆಯುತ್ತದೆ. ದೇಹದಲ್ಲಿ ಪಚನವಾಗದ ಆಹಾರ ರಾಶಿ ಬಿದ್ದು ಶರೀರಕ್ಕೆ ಮಾರಕವೆನಿಸಿದಾಗ ಅದನ್ನು ಇಂಧನದಂತೆ ಉರಿಸಲು ಶರೀರದ ಜ್ವರದ ಉಪಾಯ ಗಳನ್ನು ಕೈಗೊಳ್ಳುವುದೂ ಇದೆ.

ಶರೀರದ ಉಷ್ಣತೆ ಒಂದು ಡಿಗ್ರಿಯಷ್ಟು ಹೆಚ್ಚಾದರೂ ಅದಕ್ಕೆ ಜ್ವರ ಎನ್ನು ತ್ತಾರೆ. ಜ್ವರ ಬಂದಾಗ ದೇಹವನ್ನು ದಣಿಸದೆ ಆರಾಮವಾಗಿ, ಶರೀರದ ರೋಗಾಣು ವಿನಾಶ ಕಾರ್ಯಕ್ಕೆ ಸಹಕರಿಸಬೇಕು. ಜ್ವರ ಬರಲು ಕಾರಣಗಳು ಹಲವು. ಮನೋ ವ್ಯಾಕುಲತೆಯಿಂದ ಪರೀಕ್ಷೆಗೆ ಹೆದರುವ ವಿದ್ಯಾರ್ಥಿಗಳ ದೈಹಿಕ ಉಷ್ಣತೆ ಎರಡು ಡಿಗ್ರಿ ಏರಬಹುದು. ಭಯಭೀತಿಗಳಿಂದಾಗಿ ಮೆದುಳಿನ ರೋಗ, ಹೈಪೊಥಲಾಮಾಸ್ ಗ್ರಂಥಿಯ ಆಘಾತ ಅಥವಾ ಟ್ಯೂಮರ್‌ಗಳ ಒತ್ತಡದಿಂದ ಜ್ವರ ಬರಬಹುದು. ಪ್ರತಿ ತಿಂಗಳೂ ಮುಟ್ಟಾದ ಮೇಲೆ ಸ್ತ್ರೀಯರ ಶರೀರದಲ್ಲಿ ಅಂಡಾಣು ಉತ್ಪತ್ತಿ ಯಾಗುವ ಸಮಯದಲ್ಲಿ ಜ್ವರ ಬರುವ ಅನುಭವವುಂಟಾಗಬಹುದು.

ಬೇಸಿಗೆಯಲ್ಲಿ ಅಧ್ರ ಬಿಸಿ ಹವೆ, ಗಾಳಿ ಕಡಿಮೆಯಾಗಿ ಬೆವರು ಹರಿಯದೆ ದೇಹದಲ್ಲಿ ಉಷ್ಣತೆಯು ಏರಿ ಬರುವಂತಹ ಜ್ವರವೂ ಇದೆ. ಇದು ೧೦೮ ಡಿಗ್ರಿ ಏರಬಹುದು. ಇದನ್ನು ಬರ್ಫದ ಪಟ್ಟಿ ಅಥವಾ ತಣ್ಣೀರಿನ ಸ್ನಾನದಿಂದ ಇಳಿ ಸಬಹುದು.



ಮಕ್ಕಳಲ್ಲಿ ಥರ್ಮೋಸ್ಟಾಟ್ ಪೂರ್ಣ ಬೆಳವಣಿಗೆ ಹೊಂದಿರದ ಕಾರಣ ಅವರಲ್ಲಿ ಸಣ್ಣ ಕಾರಣಕ್ಕೂ ದೊಡ್ಡ ಜ್ವರ ಕಾಣಿಸಿಕೊಳ್ಳಬಹುದು. ವಯಸ್ಕರಲ್ಲಿ ದೊಡ್ಡ ರೋಗದಲ್ಲಿಯೂ ಜ್ವರ ಇಷ್ಟು ಏರಿದಾಗ ಬಡಬಡಿಸಲು, ಹೊರಳಾಡಲು ಆರಂಭವಾಗುತ್ತದೆ. ಜ್ವರವು ಇನ್ನೂ ಮೇಲೇರಿದಂತೆ ತಡೆಗಟ್ಟಲು ಮೆದುಳು ರಕ್ತ ಸಂಚಾರವನ್ನು ಅಧಿಕಗೊಳಿಸಿ ಪ್ರಜ್ಞೆ ತಪ್ಪುವಂತೆ ಮಾಡುತ್ತದೆ. ೧೧೨ ಡಿಗ್ರಿ ಜ್ವರವೇರಿದರೆ ಯಾರೂ ಬದುಕುಳಿವ ಸಾಧ್ಯತೆಯಿಲ್ಲ.

ಶೀತ, ಗಂಟಲುನೋವು, ಕೆಮ್ಮು ಇರುವುದು ಸಾಮಾನ್ಯ ಜ್ವರ, ಚಳಿ, ನಡು ಕಗಳೊಂದಿಗೆ ಪ್ರವೇಶಿಸಿ, ಮೈಯನ್ನು ವಿಪರೀತ ಕುದಿಸಿ, ಗಂಟೆಗಳ ಕಾಲದಲ್ಲಿ ಮೈ ಬೆವರುವಂಥದು ಮಲೇರಿಯ ಜ್ವರ, ಮೆದುಳಿನ ವ್ರಣದಿಂದ ಹೃದ್ರೋಗದಿಂದ ಬರುವ ಜ್ವರಗಳೂ ಸೂರ್ಯತಾಪದ ಜ್ವರವೂ ದಿನಕ್ಕೊಮ್ಮೆ ಬಿಟ್ಟು ಮತ್ತೆ ಬರುವ ಕರುಳಿನ ಜ್ವರ, ಎರಡು ಮೂರು ದಿನಕ್ಕೊಮ್ಮೆ ತಲೆಯೆತ್ತುವ ಆವರ್ತಕ ಜ್ವರ, ಬೆಳಿಗ್ಗೆ ಕಮ್ಮಿಯಾಗಿದ್ದು ಹೊತ್ತೇರಿದಂತೆ ಏರುವ ಟೈಫಾಯಿಡ್, ಒಂದೇ ವೇಗದಲ್ಲಿರವ "ಟೈಫಸ್" ಜ್ವರದ ಇತರ ರೀತಿಗಳು.

ಜ್ವರದಿಂದ ಶರೀರದಲ್ಲಿ ರೋಗಾಣು ನಿರೋಧಗಳು, ರಕ್ಷಣಾತ್ಮಕ ಅಂತ ಸ್ರಾವ್‌ಗಳು ಹೆಚ್ಚುತ್ತವೆ. ಜ್ವರ ಬಂದವರು ಮಲಗಿಯೇ ಇರಬೇಕೆಂಬ ನಿಯ ಮಗಳಿಲ್ಲ. ಸಾಧ್ಯವಿದ್ದರೆ ಓಡಾಡಬಹುದು ಜ್ವರದ ಬಳಿಕ ಉಂಟಾಗುವ ನಿಶ್ಶಕ್ತಿ ಯನ್ನು ಪರಿಹರಿಸಲು ವಿಟಾಮಿನ್ ಮತ್ತು ಪ್ರೋಟೀನುಗಳಿರುವ ಸುಲಭದಲ್ಲಿ ಅರಗುವ ದ್ರವಾಹಾರವನ್ನೂ ತಂಪು ನೀರನ್ನೂ ಸೇವಿಸಬಹು.

# ಆತ್ಮದ ಸಮಸ್ಯೆ [The Problem of Soul.]

ಬಸವರಾಜ್ ಮಠಪತಿ.
ನಿರೀಕ್ಷಣಾಧಿಕಾರಿ, ರೇಷ್ಮೆ ಇಲಾಖೆ, ಬೀದರ -5854 1.

ಆತ್ಮ ಅಮರ ಎನ್ನುವುದು ಎಲ್ಲರು ತಿಳಿದ ವಿಷಯವೇ· Soul is Immortal ಎಂದು ಇಂಗ್ಲಿಷ್ ಬಲ್ಲವರು ಮಾತಾಡಿ ಕೊಳ್ಳುತ್ತಾರೆ. ಅಧ್ಯಾತ್ಮದಲ್ಲಿ ಆಸಕ್ತಿ ಇದ್ದವರು ಮಾತ್ರ ಶರೀರ ಮತ್ತು ಆತ್ಮಗಳ ಭಿನ್ನತೆಯ ಬಗ್ಗೆ ಚಿಂತನೆಗೈಯುತ್ತಾರೆ. ಬದುಕು ವ್ಯವಹಾರಿಕ ಜನರು ಆತ್ಮದ ಬಗ್ಗೆ ತಲೆ ಕೆಡಿಸಿಕೊಳ್ಳಲು ಹೋಗುವುದಿಲ್ಲ. ಬದುಕು ಮಾತ್ರವೇ ನಿಜ. ಇದನ್ನು ಚೆನ್ನಾಗಿ ರೂಪಿಸಿ ಕೊಂಡು ಬಾಳಿದರೆ ಸಾಕು ಎನ್ನುತ್ತಾರೆ. ಕಣ್ಣಿಗೆ ಕಾಣದ ದೇವರು ಅನುಭವಕ್ಕೆ ಬಾರದ ಆತ್ಮ ಇವರ ಪಾಲಿಗೆ ಅರ್ಥಹೀನ. ಅಷ್ಟೇ ಸಂವೇದನಾವರ್ತಿಯಾದ ವ್ಯಕ್ತಿಗೆ ಆತ್ಮವು ಬಿಡಿಸದ ನಂಟಾಗುತ್ತದೆ. ಆದರದೇ ಸಮಸ್ಯೆ ಅವನನ್ನು ಕಾಡಿ ಬಿಡುತ್ತದೆ.

ಶರೀರ ಆತ್ಮಕ್ಕೆ ಆಶ್ರಯ ಇತ್ತಿದೆ. ಆತ್ಮ ಬಯಸುವುದನ್ನು ಕಾರ್ಯರೂಪಕ್ಕೆ ತರಲು ಶರೀರ ಒಂದು ಸೂತ್ರದ ಗೊಂಬೆ. ಆದರೆ ಬಲಹೀನ ಗೊಂಡ ಮಲಿನ ಆತ್ಮ ಶರೀರದ ಗುಲಾಮನಾಗಿ ಬಿಡುತ್ತದೆ. ಚಟಗಳಿಗೆ ದಾಸನಾಗಿ ತನ್ನ ಸ್ವರೂಪ ಮರೆತು ಬಿಡುವುದು ಸಹಜ. ಹೀಗೆ ಮಲಿನಗೊಂಡ ಆತ್ಮ ಅಜ್ಞಾನದಲ್ಲಿ ತೊಳಲಾಡುತ್ತದೆ. ಶಾಂತಿ ಇಲ್ಲದೆ ಪರದಾಡುತ್ತದೆ.

ಪ್ರತಿಯೊಬ್ಬ ವ್ಯಕ್ತಿಯ ಮುಖ್ಯ ಕರ್ತವ್ಯ: ಆತ್ಮವನ್ನು ಶುದ್ಧೀಕರಿಸಿಕೊಳ್ಳುವುದು ಶರೀರದ ಗುಣಗಳಿಗೆ ಅಂಟಿಕೊಳ್ಳದೆ ಬಿಡುಗಡೆ ಹೊಂದುವುದು! ಇದು ತುಂಬ ಕಷ್ಟಕರವಾದದು. ಇನ್ನೊಂದು ರೀತಿಯಲ್ಲಿ ಇದನ್ನು ಪ್ರಶ್ನೆಗಳಿಗೆ ಉತ್ತರಿಸುತ್ತ ಹೋಗುವ ಮಾದರಿಯಲ್ಲಿ ಸಮಸ್ಯೆ ಬಗೆ ಹರಿಸಿಕೊಳ್ಳಬಹುದು.

ಮನುಷ್ಯನ ಬದುಕು ಸಮಸ್ಯೆಗಳ ಜಾಳಿಗೆಯಾಗಿದೆ. ಜಟಿಲ ಮತ್ತು ಸಂಕೀರ್ಣತೆಯಿಂದ ಕೂಡಿದೆ. ಮೂಲವಾದ ಸಮಸ್ಯೆ: ಹೊಟ್ಟೆ..!? ವ್ಯಕ್ತಿ ಹೊಟ್ಟೆಗಾಗಿ ಎಂಥ ಕೆಲಸಕ್ಕೂ ಸಿದ್ಧನಾಗುತ್ತಾನೆ. ಕೆಟ್ಟ ಕರ್ಮಗಳಿಂದ ಹೊಟ್ಟೆ ತುಂಬಿ ಕೊಳ್ಳಬಹುದಾದರೆ ಆತ್ಮ ಇನ್ನು ಮಲಿನವಾಗಿಯೇ ಉಳಿದು ಬಿಡುತ್ತದೆ. ಬಿಡುಗಡೆ ಹೊಂದಬೇಕಾದ ಆತ್ಮ ಇನ್ನು ಬಂಧನಕ್ಕೊಳಗಾಗಿ ಬಿಡುತ್ತದೆ. ಹಾಗಾದರೆ ಯಾವ ದಾರಿ...? ಯಾರಿಂದಲೋ ತಾನಾಗಿಯೇ ಹೊಟ್ಟೆ ತುಂಬಿ ಕೊಳುತ್ತಿದೆ ಅನ್ನೋಣ. ಯಾವ

ಒಳ್ಳೆಯ ಕರ್ಮದಿಂದಲೂ ಬದುಕಲು ಶ್ರಮ ವಹಿಸಿಕೊಳ್ಳಬೇಕಾಗಿಲ್ಲ ಅನ್ನೋಣ ಅಂತು ಹೊಟ್ಟೆಯ ಸಮಸ್ಯೆ ಬಗೆ ಹರಿಯಿತು.

**ವ್ಯಕ್ತಿಗೆ ಸಮಸ್ಯೆಗಳೇ ಬೇಡ ಎನ್ನುವುದರಬಗ್ಗೆ ಚಿಂತಿಸೋಣ**

ಹಲವು ಬದುಕಿನ ಜಂಜಾಟದಿಂದ ತಪ್ಪಿಸಿಕೊಳ್ಳಲು ಸಮಾಜದಿಂದ ದೂರವಾಗಿದ್ದು ಒಂಟಿ ಬದುಕು ಸಾಗಿಸಲು ಯೋಚಿಸಬಹುದು ಹೊಟ್ಟೆ, ಬಟ್ಟೆ ವಸತಿಯ ವ್ಯವಸ್ಥೆ ಮಾಡಿಕೊಂಡು ನೆಮ್ಮದಿಯಾಗಿರಲು ಸಾಧ್ಯವೇ..? ಇವುಗಳ ಮಧ್ಯ ಮೆಲ್ಲನೆ ಹೆಡೆ ಎತ್ತುವ ಕಾಮಕ್ಕೆ ಯಾವ ವ್ಯವಸ್ಥೆ..? ಮದುವೆಯೇ.? (ಆಹಾರದಿಂದ ಕಾಮತನ್ನು ತಗ್ಗಿಸಬಹುದು. ಯೋಗಾಸನ ಈ ದಿಸೆಯಲ್ಲಿ ಸಹಾಯಕಾರಿ. ಆದರೆ ಇದು ಜನ ಸಾಮಾನ್ಯರಿಗೆ ಬದುಕಿಗೆ ಮೀರಿದ್ದು) ಮದುವೆಯಾದರೆ ಸಮಸ್ಯೆಗಳ ಸಂಕೋಲೆಗಳು...! ಮಗು ಮತ್ತು ಅದರ ಪೋಷಣೆ ಹೋರಾಟ ದುಃಖ.. ನೋವು.. ಚಿಂತೆ.. ಹಾಗದಾರೆ ಬ್ರಹ್ಮಚರ್ಯವೇ ಸುಖ ಶಾಂತಿಗೆ ನಾಂದಿಯೇ...? ಬದುಕಿನ ಉದ್ದವಾದ ದಾರಿ ಸವೆಯಲು ಒಂಟಿ ವ್ಯಕ್ತಿಗೆ ಸಾಧ್ಯವೇ..? ದಿನದ ವೇಳೆ ವ್ಯಕ್ತಿ ಹೇಗೂ ಕಳೆಯುತ್ತಾನೆ. ಆದರೆ ರಾತ್ರಿ ..? ಪ್ರತಿಯೊಬ್ಬರ ಬದುಕಿನ ರಾತ್ರಿಗಳೇ ಮಹತ್ವ ಪೂರ್ಣಗಳು ಅವನ್ನು ಕಳೆಯುವ ರಾತ್ರಿಗಳಿಂದಲೇ ವ್ಯಕ್ತಿಯ ಸ್ವಭಾವ ಮತ್ತು ಗುರಿಯನ್ನು ಅವನ ಬುದ್ಧಿ ಮಟ್ಟವನ್ನು ಗುರುತಿಸಬಹುದು. ಏಕಾಂಗಿ ವ್ಯಕ್ತಿಗೆ ನಿದ್ದೆ ವೈರಿಯಾಗಿ ಬಿಡುತ್ತದೆ. ಶರೀರದ ಕಾಮ ಹೆಣ್ಣನ್ನು ಬಯಸುತ್ತದೆ. ಸುಖಿಸುವ ಉತ್ಕಟ ಬಯಕೆಯೇ ಸಂಭೋಗ ಎಂಬ ವಿಧಾನದಲ್ಲಿ ಹೆಣ್ಣನ್ನು ರೂಪಿಸಿಕೊಳ್ಳಲು ಕಾರಣವಾಗುತ್ತದೆ. ಹೆಣ್ಣಿನ ಅನಿವಾರ್ಯವೇ ಪ್ರಕೃತಿ ಇಲ್ಲವೇ ವಿಕೃತಿ..

ಸಮಸ್ಯೆಯ ಜಾಳಿಗೆಯೇ ಬೇಡ ಎಂದು ವಿಕೃತಿಯೊಂದಿಗೆ ಬದುಕನ್ನು ನಿರ್ವಹಿಸಬಹುದು. ಆದರೆ ಆತ್ಮದ ಗತಿ..? ಶರೀರವೇನೋ ತೃಪ್ತಿ ಹೊಂದಬಹುದು. ಆದರೆ ಆತ್ಮಕ್ಕೆ ದೊರಕಬೇಕಾದ ಬಿಡುಗಡೆಯ ಅನುಭವ ಮಾತ್ರ ಸಿಗುವುದಿಲ್ಲ. ಇಚ್ಛೆಯನ್ನು ಅದರ ಮೊಳಕೆಯಲ್ಲಿಯೇ ಚಿವುಟಿ ಬಚಾವಾಗಬಹುದು ನಿರ್ಲಿಪ್ತತೆ ವ್ಯಕ್ತಿಯನ್ನು ಉಳಿಸುತ್ತದೆ.

ಒಂದಲ್ಲ ಒಂದು ದಿನ ಶರೀರ ರೋಗಕ್ಕೆ ತುತ್ತಾಗುತ್ತದೆ. ವ್ಯಕ್ತಿ ನಿಸ್ಸಹಾಯಕನಾಗುತ್ತಾನೆ. ಇನ್ನೊಬ್ಬರ ಸಹಾಯಕ್ಕಾಗಿ ಆಶ್ರಯಕ್ಕಾಗಿ ಹಲುಬುತ್ತಾನೆ. ಇತರರ ಹಂಗು ಬೇಡ ಎಂಬ ಛಲದವನು ವಿಷ ಸೇವಿಸಿ ಪ್ರಾಣ ತೊರೆಯಲು ನಿರ್ಧರಿಸಬಹುದು, ಪ್ರಾಣ ಹೊರಟು ಹೋಗುತ್ತದೆ. ಶವ ಹೇಗೋ ಯಾರೋ ಎತ್ತಿ ಹಾಕುತ್ತಾರೆ. ಯಾರೂ ಇಲದಿದ್ದರೆ ಕಡೆಯ ಪಕ್ಷ ಪ್ರಕೃತಿದತ್ತವಾದ ಇರುವೆ, ಹದ್ದು ಕಾಗೆಗಳಿಂದ ಸುಳಿವು ಸಿಗದಂತೆಯೂ ಆಗಬಹುದು. ಅಂತು ಶರೀರದ ಸಮಸ್ಯೆ ಬಗೆ ಹರಿಯಿತು



ಆದರೆ ಆತ್ಮ..? ಆತ್ಮದ ಸಮಸ್ಯೆ ಗಮನಾರ್ಹವಾಗುಳಿಯುತ್ತದೆ. ಶುದ್ಧಗೊಳಿಸದ ಆತ್ಮ ಅತೃಪ್ತಿಯಾಗಿಯೇ ಹೊಯ್ದಾಡುತ್ತದೆ. ವಿಷ ಸೇವಿಸಿ ಸತ್ತ ವ್ಯಕ್ತಿಯೇ ಮತ್ತೆ ಪಶ್ಚಾತ್ತಾಪ ಪಡುವ ವಸ್ತುವೂ ಸಹ ಅವನೇ ಆಗುಳಿಯುತ್ತಾನೆ. ಬಿಡುಗಡೆ ಪಡೆಯಲು ಸೂಕ್ತ ದಾರಿಯ ಕಲ್ಪನೆ ಇಲ್ಲದೆ ಕೆಟ್ಟ ಕರ್ಮಗೈಯುವುದು ಅಷನೇ ಶರೀರದ ಸಂಬಂಧ ಗುರುತಿಸದೆ ಪ್ರತ್ಯೇಕಗೊಂಡು ತೊಳಲಾಡುವುದು ಅಷೆ..! ಇವುಗಳ ಮಧ್ಯೆ ಅಜ್ಞಾನ ತನ್ನ ರಾಜ್ಯ ಸ್ಥಾಪಿಸಿರುತ್ತದೆ- ನಾವು ಮಾಡುವ ಕಾರ್ಯಗಳು ಆತ್ಮದ ಅಪ್ಪಣೆಯಂತಿರಬೇಕು. ಕಾರ್ಯಗಳಿಂದ ಬಿಡುಗಡೆ ಪಡಿಸಲು, ಆತ್ಮವನ್ನು ಶುದ್ಧೀಕರಿಸಲು ಪ್ರಜ್ಞೆ ಕೆಲಸ ಮಾಡಬೇಕು. ಅಜ್ಞಾನ ಮತ್ತು ಜ್ಞಾನಗಳ ಮಧ್ಯೆ ಪ್ರಜ್ಞೆ ದಲ್ಲಾಲಿಯಂತೆ ಕಾರ್ಯಗೈಯುವ ಮಧ್ಯವರ್ತಿ...! ಪ್ರಜ್ಞೆಯ ಅರಿವು ಸಹ ಇಲ್ಲಿ ಗಮನಿಸಬೇಕಾದ ಅಂಶ ! ಎಲ್ಲವುಗಳ ಮೇಲೆ ಒಂದು ನಿಗ ಇಡುವ ವಸ್ತುವೂ ಅದೆ__ ಅಥವಾ ಪ್ರಜ್ಞೆ ತನ್ನ ಹೊರ ವೈಯ ಮತ್ತು ಒಳವೈಯ ಅರಿವಿನೊಂದಿಗೆ ಕಾರ್ಯಗೈದರೆ ಅದೇ ಆತ್ಮ ಸಾಕ್ಷಾತ್ಕಾರ ಅನ್ನಿಸಿ ಕೊಂಡೀತು !? ●

---



## ಸಂತಾಪ ಸೂಚನೆ

ಶ್ರೀ ಮಠದ ಶೈಕ್ಷಣಿಕ ಸಂಸ್ಥೆಯಲ್ಲಿ ಸಿಬ್ಬಂದಿ ವರ್ಗದ ಉದ್ಯೋಗಿಯಾಗಿ, ಶ್ರೀ ಸಿದ್ಧಲಿಂಗೇಶ್ವರ ಮುದ್ರಣಾಲಯದಲ್ಲಿ ಸೇವೆಸಲ್ಲಿಸುತ್ತ, "ಸಿದ್ಧಗಂಗಾ" ಮಾಸಿಕದ ಬಳಗವಲ್ಲಿದ್ದುಕೊಂಡು ಪತ್ರಿಕೆಯ ಅಭಿವೃದ್ಧಿಗಾಗಿ ಶ್ರಮಿಸುತ್ತ, ಸಹೋದ್ಯೋಗಿಗಳಲ್ಲಿ ನಗುಮೊಗದವರಾಗಿ ಎಲೆಮರೆಯ ಹೂವಿನಂತಿದ್ದ ಶ್ರೀ ಪುಟ್ಟಸಿದ್ದಯ್ಯನವರು ದಿನಾಂಕ 19-12.86 ನೇ ಶುಕ್ರವಾರದಂದು ಶಿವಾಧೀನರಾದ್ದದು ತುಂಬಾ ದುಃಖದಾಯಕ. ಕೊನೆಯ ನಿಮಿಷದವರೆಗೂ ಕರ್ತವ್ಯ ಪರಾಯಣರಾಗಿದ್ದು 1986 ರ ಡಿಸೆಂಬರ್ ತಿಂಗಳಿನ ಸಂಚಿಕೆಯ ಮುದ್ರಣದ ಎಲ್ಲ ಕೆಲಸವನ್ನೂ ತೃಪ್ತಿಕರವಾಗಿ ಮುಗಿಸಿದ್ದು ದಿವಂಗತರ ಕಾರ್ಯನಿಷ್ಠೆಯಾಗಿತ್ತು, ದಯಾಮಯನಾದ ಶ್ರೀ ಸಿದ್ಧಲಿಗೇಶ್ವರನು ದಿವಂಗತರ ಆತ್ಮಕ್ಕೆ ಚಿರಶಾಂತಿಯನ್ನು ಕರುಣಿಸಲೆಂದೂ ದಿವಂಗತರ ಕುಟುಂಬ ವರ್ಗದವರಿಗೆ ಅಗಲಿಕೆಯಿಂದಾದ ದುಃಖವನ್ನು ಸಹಿಸುವ ಶಕ್ತಿಯನ್ನು ದಯಪಾಲಿಸಲೆಂದೂ "ಸಿದ್ಧಗಂಗಾ" ಪ್ರಾರ್ಥಿಸುತ್ತದೆ.

# ವಿನಯ ಮತ್ತು ಗುಣ ಶೀಲಗಳು

— ಜಿ. ಶಾರದರಾಜಶೇಖರ್.
847, 4ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು-40.

ವಿನಯವೆಂಬುದು ಸಹಜವಾದ ನಮ್ರತೆಯ ಸದ್ಗುಣದ ಹೆಗ್ಗುರುತು, 'ಅತಿ ವಿನಯಂ ಧೂರ್ತಲಕ್ಷಣಂ' ಎಂಬ ಉಕ್ತಿಯೂ ಉಂಟು. ನಿಜವಾದ ಮಹಾಪುರುಷರ ಅವರ ನಡೆನುಡಿಗಳಲ್ಲಿ ಪೂರ್ಣ ವಿನಯಸಂಪನ್ನರು, ವಿನಯವು ವ್ಯಕ್ತಿತ್ವದ ಘನತೆಯನ್ನು ತೋರುತ್ತದೆ. ಹುರುಳಿಲ್ಲದ ಅಲ್ಪ ಮನುಷ್ಯರಿಗೆ ತಲೆಕೊಬ್ಬಿನವರು, ದುರಹಂಕಾರಿಗಳು, ಬರಿಯ ಬಂಡಾಯಿತನ, ಒಣಹೆಮ್ಮೆ, ಅಹಂಕಾರ, ಪ್ರತಿಷ್ಠೆ ಇವುಗಳೆಲ್ಲವೂ ಅಂತರ್ಯದ ಶೂನ್ಯದ ಪ್ರತೀಕ, ವಿನಯವು ಕೀಳುಮಟ್ಟದಲ್ಲ, ಕೀಳು ಹುಟ್ಟದಲ್ಲ, ಅಹಂಕಾರ ಬಿಗುಮಾನ ಗರ್ವದ ಸೊಕ್ಕುಗಳೀಗ ಕೀಳು ತೆರದವು, ಖಾಲಿ ಕೊಡುಗಳು, ಅರ್ಧ ತುಂಬಿರುವ ಕೊಡಗಳು ತುಳುಕುತ್ತಿವೆ, ಶಬ್ದ ಮಾಡುತ್ತಿವೆ, ಪೂರ್ಣಕುಂಭಗಳು ತುಳುಕುವುದಿಲ್ಲ, ಆದ್ದರಿಂದ ವಿನಯ ಗಾಂಭೀರ್ಯ.

ವಿದ್ಯೆಯಿದ್ದು ವಿನಯಶೀಲತೆ ಆ ವ್ಯಕ್ತಿಯಲ್ಲಿ ಇಲ್ಲದಿದ್ದರೆ ಆ ವ್ಯಕ್ತಿ ಪೂಜನೀಯನೆನಿಸಲಾರ. ಚಿನ್ನಕ್ಕೆ ಮೆರಗುಕೊಟ್ಟಂತೆ, ವಿನಯಉಳ್ಳವನ ವ್ಯಕ್ತಿತ್ವ ಪ್ರಕಾಶಗೊಳ್ಳುತ್ತದೆ. ಯಾವ ವ್ಯಕ್ತಿ ಮೃದುಸ್ವಭಾವದವನಾಗಿ, ನಮ್ರನಾಗಿ, ನಿರಾಕುಲನಾಗಿ ಏಕರೀತಿಯಲ್ಲಿರುತ್ತಾನೋ ಅವನೇ ಗಣ್ಯವ್ಯಕ್ತಿ. ವಿನಯವು ಅಶಕ್ತತೆಯ ಅಥವಾ ನ್ಯೂನತೆಯ ದೌರ್ಬಲ್ಯದ ಲಕ್ಷಣವಲ್ಲ, ಅದು ನಿಜವಾಗಿಯೂ ಮಹತ್ವದ ಸೌಜನ್ಯದಮುದ್ರೆ ಆದರೆ ಕೆಲವು ವ್ಯಕ್ತಿಗಳು ಅತೀ ವಿನಯವಂತರಂತೆ ಮೇಲುನೋಟಕ್ಕೆ ಸಜ್ಜನರಂತೆ ನಟಿಸಬಹುದು. ಸಮಾಜದ ಒಪ್ಪಿಗೆಯನ್ನು ಪಡೆಯಲೋಸುಗ ಕೆಲವರು ವಿನಯಶೀಲರಂತೆ ವರ್ತಿಸುತ್ತಾರೆ. ಆಗ ಅವರ ಸನ್ಮಾರ್ಗದ ನಡತೆ ನಿಶ್ಚಿತರೂಪವನ್ನು ತಾಳಿರುವ ಮನೋಭಾವಗಳಿಂದ ಪ್ರೇರಿತವಾದುದಲ್ಲ. ಹೆಂಟೆಗೊದ್ದನಂತೆ ಅವರು. ಸಮಾಜದಲ್ಲಿ ಅರ್ಹರೆನಿಸುವ ಹಂಬಲಕ್ಕಾಗಿ ಬಣ್ಣ ಕಟ್ಟುವ ಕಪಟ ನಾಟಕವನ್ನು ನಟಿಸುವರೆನ್ನಬಹುದು.

ವಿನಯದ ನಡತೆ ಎಂಬುದು ಯಾವಾಗಲೂ ಒಂದು ಐಚ್ಛಿಕ ಆಯ್ಕೆಯ ಬುನಾದಿಯ ಮೇಲೆ ನಿಂತಿರುತ್ತದೆ. ಆಯ್ಕೆಯಾದರೋ ಸಂಕಲ್ಪದಿಂದ ಕೂಡಿದ್ದು, ಆಲೋಚಿಸಿ ಇಷ್ಟಪಟ್ಟದ್ದು. ವ್ಯಕ್ತಿಯ ಮನಸ್ಸು ಬುದ್ಧಿಗಳ ಪೂರ್ಣ ಜವಾಬ್ದಾರಿಯಿಂದ ಕೂಡಿದ್ದು, ಒಬ್ಬವ್ಯಕ್ತಿಯ ವಿನಯಶೀಲತೆಯ ನಡತೆ ಸಾಧಾರಣವಾಗಿ



ಆತನ ವ್ಯವಸ್ಥಿತ ಶೀಲಸ್ವಭಾವದ ವೈಯಕ್ತಿಕತೆಯ ಪ್ರತಿಬಿಂಬ, ಆತನ ವ್ಯಕ್ತಿ-ವೈಲಕ್ಷಣದ ಸಂಕೇತ.

ವ್ಯಕ್ತಿಯ ಶೀಲ ವೈಶಿಷ್ಟ್ಯಕ್ಕನುಸಾರವಾಗಿಯೇ ಆತನ ನಡೆನುಡಿಗಳು ರೂಪುಗೊಳ್ಳುತ್ತವೆ, ನಾವು ಇತರರ ನಡೆನುಡಿಗಳನ್ನು ಸೂಕ್ಷ್ಮವಾಗಿ ಸೃಷ್ಟಿಸಿದ ಪಕ್ಷದಲ್ಲಿ ಅವರ ಶೀಲಸ್ವಭಾವಗಳನ್ನು ಗುರುತಿಸಬಹುದು. ವ್ಯಕ್ತಿಯ ಶೀಲ ಸ್ವಭಾವವು ಅವರಿಂದ ಪ್ರಕಟವಾಗುವ ನಡವಳಿಕೆಗಳಿಂದ ಗೊತ್ತಾಗುತ್ತದೆ

ಅರಿಸ್ಟಾಟಲ್ ಎಂಬ ಪ್ರಖ್ಯಾತ ಗ್ರೀಕ್ ತತ್ವಜ್ಞಾನಿಯು ಒಳ್ಳೆಯ ನಡತೆಗಳ ಅಭ್ಯಾಸವನ್ನು ಮಾಡಿಕೊಳ್ಳುವುದೇ ನೀತಿ. ಜೀವನದಲ್ಲಿ ಬಹುಮುಖ್ಯವಾದುದೆಂದು ಹೇಳಿದ್ದಾನೆ. ಸಾಕ್ರಟೀಸನು ಸೌಶೀಲ್ಯವು ನೀತಿ ಪರಿಜ್ಞಾನವೆಂದು ಹೇಳಿದ್ದಾನೆ. ಹೀಗೆ ಋಜುಮಾರ್ಗವನ್ನೇ ಅನುಸರಿಸುವ ಅಭ್ಯಾಸವುಳ್ಳವನು ನಿರಂತರವೂ ಒಳ್ಳೆಯದನ್ನೇ ಮಾಡುತ್ತಾನೆ ಮತ್ತು ಹಾಗೆ ಸಭ್ಯವಾಗಿ ವರ್ತಿಸುವುದರಲ್ಲಿ ಒಂದು ಬಗೆಯ ಹುನದ ಆನಂದವನ್ನು ಪಡೆಯುತ್ತಾನೆ.

ವಿನಯವು ಪ್ರತಿಯೊಬ್ಬರಲ್ಲಿಯೂ ರೂಪುಗೊಳ್ಳಬೇಕು. ಅದು ತಾನಾಗಿಯೇ ಬರುವುದಿಲ್ಲ. ಅದನ್ನು ಯೋಚಿಸಿ ರೂಪಿಸಿಕೊಳ್ಳಬೇಕು ಶೀಲಸ್ವಭಾವವನ್ನು ವಿನಯವನ್ನು ಗಳಿಸಿಕೊಳ್ಳುವುದೆಂದರೆ ವ್ಯಕ್ತಿಯ ವ್ಯವಸ್ಥಿತ ಆಲೋಚನಾ ರೀತಿ ಭಾವನಾರೀತಿ ಮತ್ತು ಕರ್ತವ್ಯ ರೀತಿ.

ಪ್ರತಿಯೊಬ್ಬರಲ್ಲಿಯೂ ಎರಡು ವ್ಯಕ್ತಿತ್ವಗಳಿವೆ. ಒಂದು ಕೆಳದರ್ಜೆಯ ವಕ್ತಿತ್ವ, ಮತ್ತೊಂದು ಮೇಲ್ದರ್ಜೆಯ ವ್ಯಕ್ತಿತ್ವ. ಆತನಲ್ಲಿಯ ಪಶುಸ್ವಭಾವ, ಪ್ರಾಣಿಧರ್ಮವೇ ಆತನ ಕೆಳದರ್ಜೆಯ ವ್ಯಕ್ತಿತ್ವ. ಆತನಲ್ಲಿಯ ವಿವೇಚನೆಯೇ ಆತನ ಮೇಲ್ದರ್ಜೆಯ ವ್ಯಕ್ತಿತ್ವ, ಅದೇ ಆತನಲ್ಲಿಯ ದೈವತ್ವ, ಅದೇ ಆತನ ಶೀಲ ಸ್ವಭಾವ. ಅದು ಆತನಲ್ಲಿಯ ಪಾಶವೀ ಅಂಶವನ್ನು ನಿಗ್ರಹಿಸಿ ಸಂಯಮದಲ್ಲಿಡುತದ್ದೆ. ಈ ರೀತಿಯ ಶೀಲವನ್ನು ಮತ್ತು ಸೌಶೀಲ್ಯವನ್ನು ಪ್ರಯತ್ನ ಪೂರ್ವಕವಾಗಿ ಅಭ್ಯಾಸ ಮಾಡಿಕೊಳ್ಳಬೇಕು,

ವಿನಯ ಗುಣಶೀಲಗಳನ್ನು ಬೆಳಸಲು ಬಾಲ್ಯ ಒಳ್ಳೆಯ ಸಮಯ. ಆಗ ಯಾವ ನಿರ್ದಿಷ್ಟ ಮನೋಭಾವಗಳೂ ರೂಪುಗೊಂಡಿರುವುದಿಲ್ಲ. ಉಚಿತ ರೀತಿಯ ಶೀಲಶಿಕ್ಷಣದಿಂದ ಪ್ರಯೋಜನವಾಗಬಲ್ಲದು. ಅದೇಕಾರ್ಯವನ್ನು ಕೌಮಾರ್ಯ ಯೌವ್ವನಗಳಲ್ಲಿ ಯತ್ನಿಸುವುದು ವಿಫಲಯತ್ನ ಮಾತ್ರವಲ್ಲ, ಅಪಾಯಕಾರಿಯೂ ಆಗಿ ಪರಿಣಮಿಸುತ್ತದೆ.

ಅನೇಕ ದೇಶಗಳಲ್ಲಿ ನೀತಿ ಶಿಕ್ಷಣದಬಗ್ಗೆ ಒಂದು ರೀತಿಯ ಅನಿರ್ದಿಷ್ಟವೂ ಗೊಂದಲವೂ ಆದ ಭಾವನೆಗಳು ತಲೆದೋರಿವೆ. ಶಾಲೆಯಲ್ಲಿ ಆ ನಿರ್ದಿಷ್ಟಕಾರ್ಯಕ್ರಮಗಳನ್ನು ತರುವ ಬಗ್ಗೆ ಒಮ್ಮತ ಇರುವುದಿಲ್ಲ. ಹೇಗೆ ಆಗಲಿ ಮಕ್ಕಳ ಗುಣ ಶೀಲಗಳ ಬೆಳವಣಿಗೆಯಂತೂ ಆಗಲೇಬೇಕು. ಆ ಬಗ್ಗೆ ಶಾಲೆಯ ಹೊಣೆಗಾರಿಕೆಯನ್ನು ಯಾರೂ ಮರೆಯುವಂತಿಲ್ಲ. ಆದರೆ ಅದಕ್ಕೆ ಏರ್ಪಡಬೇಕಾದ ಕಾರ್ಯಕ್ರಮದ ಸ್ವರೂಪದಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಬಹುದು. ಅದು ನೇರವಾದ ಬೋಧನೆಯ ರೂಪದಲ್ಲಿರಬೇಕೆಂದು ಕೆಲವರು ವಾದಿಸಿದರೆ ಮತ್ತೆ ಕೆಲವರು ಅದು ಸಾಮಾಜಿಕ ಜೀವನದ ಸಫಲವಾಗಿ ರೂಪುಗೊಳ್ಳಬೇಕೆಂದು ಮತ್ತೆ ಕೆಲವರು ವಾದಿಸಬಹುದು.

ಮಕ್ಕಳ ಎಳೆಯ ವಯಸ್ಸು ಅಂಥ ಶೀಲಸಂಪನ್ನತೆಯ ನಿರೂಪಣೆಗೆ ಸೂಕ್ತ ಕಾಲ, ಅನಂತರವೂ ಅದರ ಅಗತ್ಯವಿಲ್ಲವೆನ್ನುವಂತಿಲ್ಲ. ನಿತ್ಯ ಪರಿವರ್ತನೆಯಾಗುತ್ತಿರುವ ಸಮಾಜ ಜೀವನದಲ್ಲಿ ಬಾಳಬೇಕಾಗಿರುವುದರಿಂದ ಒಮ್ಮೆ ರೂಪುಗೊಂಡ ಗುಣಶೀಲಗಳು ಅಷ್ಟಿಷ್ಟು ಮಾರ್ಪಡುವ ಅಗತ್ಯ ಇದ್ದೇ ಇರುತ್ತದೆ.

ಗುಣ ಶೀಲಗಳು ನಿಶ್ಚಿತ ರೂಪವನ್ನು ತಾಳಿದಾಗಲೇ ಅವು ವ್ಯಕ್ತಿಯ ಅಂತರಾತ್ಮದಲ್ಲಿ ಅಂತರ್ಗತವಾಗುವುದು. ವ್ಯಕ್ತಿಗೆ ಸಿದ್ಧಿಸಿರುವ ಮನೋಭಾವಗಳಿಗೆ ಆಧಾರವಾದ ಮೌಲ್ಯಗಳುಳ್ಳ ಬೆಲೆ ಅರಿವಾದಾಗಲೇ ಅಂಥ ನಿಶ್ಚಿತ ಸ್ವರೂಪ ಗುಣಶೀಲಗಳಿಗೆ ಬರುವುದು, ತನ್ನ ಮತ್ತು ಸಮಾಜದ ಕ್ಷೇಮಚಿಂತನೆಯ ಆಧಾರದ ಮೇಲೆ ರೂಪುಗೊಂಡ ಆತ್ಮದ ಚಾಲಕ ಶಕ್ತಿ ಸದ್ಗುಣಗಳ ವರ್ತನೆಗೆ ಮೂಲಾಧಾರ, ವ್ಯಕ್ತಿಯ ಸಂತೋಷಕ್ಕೆ ವರ್ತನೆಯೇ ಆಧಾರ. ●





# ‘ಕೊಲೆಗೈಯೆ ಬಂದು ಮಲ್ಲಿಗೆಯ ಮಾಲೆಯಾದ’’

—ರವಿ. ತುಂಕೂರು.

ಅನುಭವ ಮಂಟಪದ ಶಿವಶರಣರಲ್ಲಿ "ನಿಜಲಿಂಗ ಚಿಕ್ಕಯ್ಯ" ಇವರೂ ಶ್ರೇಷ್ಠರು, ಮತ್ತು ಬಸವಣ್ಣನವರ ಆತ್ಮೀಯ ಅನುಯಾಯಿಗಳು. ಚಿಕ್ಕಯ್ಯನವರ ಮೇಲೆ ಅಣ್ಣನವರಿಗೆ ಅಭಿಮಾನ ಮತ್ತು ಗೌರವ ಎಷ್ಟಿತ್ತೇನೆಂದು ಅವರ ಕೆಲವು ವಚನಗಳಿಂದ ತಿಳಿಯಬಹುದು.

"ಅಪ್ಪನು ನಮ್ಮ ಮಾದರ ಚನ್ನಯ್ಯ
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ
ಚಿಕ್ಕಯ್ಯ ನಮ್ಮಯ್ಯ ಕಾಣಿರಯ್ಯ"......ಎಂದು ಹೇಳಿದ್ದಾರಲ್ಲದೆ

ಮತ್ತೊಂದು ವಚನದಲ್ಲಿ.

ಚಿಕ್ಕಯ್ಯ, ಚನ್ನಯ್ಯ ಎತ್ತಿ ಮುದ್ದಾಡಿದರೆನ್ನ
ಕೂಡಲ ಸಂಗಯ್ಯ. ಎಂದು ನುಡಿದಿದ್ದಾರೆ. ಇವರು ಶಿವಶರಣರಾದ ಬಗೆ ಆದ ಅನುಭವ ಎಷ್ಟು ವಿಚಿತ್ರ........ಸತ್ಯ.

ಚಿಕ್ಕಯ್ಯನವರು ಕಾಶ್ಮೀರದ ಮಾಂಡವ್ಯ ರಾಜ್ಯದ ಅರಸು ಮಹಾದೇವ ರಾಜರಲ್ಲಿ ಕೆಲಸ ಮಾಡಿಕೊಂಡಿದ್ದರು. ಅರಸು ಪರಮ ಶಿವಭಕ್ತನು. ಆತನು ಮಾಹೇಶ್ವರನ ಪೂಜೆ ಇಲ್ಲದೆ, ಜಂಗಮರಿಗೆ ತೃಪ್ತಿಪಡಿಸದೆ ಎಂದೂ ಊಟ ಮಾಡುತ್ತಿರಲಿಲ್ಲ. ಆ ಸಮಯದಲ್ಲಿ ಬಸವೇಶ್ವರರು ಕರ್ನಾಟಕದಲ್ಲಿ ಅತ್ಯಂತ ಪ್ರಸಿದ್ಧರಾಗಿ ಮೆರೆಯುತ್ತಿದ್ದರು. ಅಲ್ಲಮ ಪ್ರಭುದೇವರ ಅಣತಿಯಿಂದ ಅನುಭವ ಮಂಟಪದ ಜ್ಞಾನ ಜ್ಯೋತಿ ದೆಸೆದಿಕ್ಕುಗಳಿಗೂ ಪ್ರಜ್ವಲಿಸುತ್ತಿದ್ದ ಸಮಯದಲ್ಲಿ ಕಾಶ್ಮೀರದಿಂದ ಅನೇಕ ಶಿವಭಕ್ತರು ಜ್ಞಾನಾರ್ಥಿಗಳಾಗಿ ಕಲ್ಯಾಣಕ್ಕೆ ವಲಸೆ ಬಂದು ನೆಲಸಿದರು. ಇದರಿಂದ ಮಾಂಡವ್ಯದರಸ ಮಹಾ ದೇವರಾಜರಿಗೆ ಕೋಪ ಹುಟ್ಟಿತು. "ಶರಣರು ಕಲ್ಯಾಣಕ್ಕೆ ವಲಸೆ ಹೋಗಲು ಬಸವಣ್ಣನವರೇ ಕಾರಣ" ಎಂದು ಅವರ ಮೇಲೆ ವೈರಧರಿಸಿದನು.

ಅಣ್ಣನವರನ್ನು ಕೊಲ್ಲಲು ಗುಟ್ಟಾಗಿ ತನ್ನ ಅಂತರಂಗ ಸೇವಕರಾದ ಚಿಕ್ಕಯ್ಯ ದ್ವಯರನ್ನು ಕಳುಹಿಸಿದನು. ಆ ಸೇವಕರು ಗುಪ್ತವೇಶಧಾರಿಗಳಾಗಿ ಕಲ್ಯಾಣಕ್ಕೆ

...

ಬಂದು, ಬಸವಣ್ಣನವರ ಅರಮನೆಯ ದಿನನಿತ್ಯ ದಾಸೋಹದಲ್ಲಿ ಪಾಲ್ಗೊಂಡರು. ಶಿವಲಿಂಗ ಧಾರಿಗಳಲ್ಲದ ಈ ಚಿಕ್ಕದ್ವಯರು ಚಿಕ್ಕ ಚಿಕ್ಕ ಬದನೆಕಾಯಿಗಳನ್ನು ಲಿಂಗಗಳಂತೆ ವಸ್ತ್ರಗಳಲ್ಲಿ ಕಟ್ಟಿ ಕೊಂಡು ದಾಸೋಹದಲ್ಲಿ ಪಾಲ್ಗೊಂಡರು. ಆದರೆ ಪೂಜಾ ಸಮಯಕ್ಕೆ ಲಿಂಗ ಪೂಜೆಗೆ ಪರಿಸ್ಥಿತಿ ಅರಿತು ಅನುಭವಿಗಳಲ್ಲದ ಈ ಗುಪ್ತ ವೇಷಧಾರಿಗಳು ಭಯದಿಂದ ಥರ ಥರ ನಡುಗಿದರು.

ಆಗ ಬಸವೇಶ್ವರರು ದಿವ್ಯ ಜ್ಞಾನದಿಂದ ಇದನ್ನು ತಿಳಿದು ಆ ಕಪಟ ಲಿಂಗಧಾರಿ ಜಂಗಮರು ಕಟ್ಟಿದ್ದ ಬದನೆಕಾಯಿಗಳನ್ನು ಶಿವಲಿಂಗಗಳನ್ನಾಗಿ ತಮ್ಮ ಶಿವಶಕ್ತಿಯಿಂದ ಮಾರ್ಪಾಟುಮಾಡಿ ಪೂಜೆ ಸಾಂಗವಾಗುವಂತೆ ಪ್ರೇರೇಪಿಸಿದರು. ಆಗ ತಮ್ಮ ತಮ್ಮ ತಪ್ಪಿನ ಅರಿವು ಮೂಡಿ ಅಣ್ಣನವರ ಪಾದದಲ್ಲಿ ಕ್ಷಮೆಯಾಚಿಸಿ ಶಿವಲಿಂಗ ದೀಕ್ಷೆ ಪಡೆದು ಶಿವಶರಣರಾದರು. ಹೀಗೆ ಶರಣರಾದ ಈ ಚಿಕ್ಕಯ್ಯದ್ವಯರು "ಚೋರ ಚಿಕ್ಕಯ್ಯ" ಮತ್ತು "ನಿಜಲಿಂಗ ಚಿಕ್ಕಯ್ಯ" ಎಂದು ಪ್ರಸಿದ್ಧರಾದರು.

"ಕೊಲೆಗೈಯೆ ಬಂದು ಮಲ್ಲಿಗೆಯ ಮಾಲೆಯಾದ" ಈ ಶರಣರು ಆ ಜಗದೀಶ್ವರನ ಅಂತರಂಗ ಭಕ್ತರಲ್ಲೊಬ್ಬರಾದರು. ಈ ನಿಜಲಿಂಗ ಚಿಕ್ಕಯ್ಯನವರು "ಉಳಿಯುಮೇಶ್ವರ" ಅಥವ "ಉಳಿವುಮೇಶ್ವರ" ಎಂಬ ಕಾವ್ಯನಾಮಾಂಕಿತದಿಂದ ಅನೇಕ ವಚನಗಳನ್ನು ಹಾಡಿದ್ದಾರೆ.

ಇವರ ಶಿವಪೂಜೆ ಅಮೋಘವಾದದ್ದು ಅದ್ಭುತವಾದದ್ದು, ಶಿವನನ್ನು ಮನಸಾರೆ ಭಕ್ತಿಯಿಂದ ಕೂಗಿ ಕರೆಯುತ್ತಿದ್ದರು.

"ಎನ್ನ ಮನವ ಮಂಚವ ಮಾಡಿ
ತನುವ ಮಲಗಿಸುವೆ ಬಾರಯ್ಯ
ನನ್ನ ಶಿವಲಿಂಗ ತಂದೆ ಬಾರಯ್ಯ
ಭಕ್ತ ವತ್ಸಲ ದೇವ ಬಾರಯ್ಯ
ಎನ್ನಂತರಂಗದಲಿರು ಬಾರಯ್ಯ
ಎನ್ನ ಬಹಿರಂಗದಲಿರು ಬಾರಯ್ಯ
ಓಂ ನ ಮ ಶಿ ವಾ ಯ ಎನುವೆ
'ಉಳಿಯುಮೇಶ್ವರ' ನೀ ಬಾರಯ್ಯ

ಎಂದು ಆನಂದದಿಂದ ತಂದೆ ಶಿವನನ್ನು ಭಕ್ತಿಯಿಂದ ಆರಾಧಿಸಿದ್ದಾರೆ.

ಇವರ ಪ್ರಸಿದ್ಧಿಗೆ ಮತ್ತೊಂದು ಘಟನೆ ಕಾರಣವಾಯ್ತು. ಒಮ್ಮೆ ರಾಜಮಾರ್ಗದಲ್ಲಿ ಬರುತ್ತಿದ್ದ ಚಿಕ್ಕಯ್ಯನವರನ್ನು ತಳವಾರ ಶಿವಭಕ್ತನಾದ ಗಂಗಯ್ಯನು



ಲಿಂಗಪೂಜೆಗೆ ಕರೆದೊಯ್ದನು. ಆಗ ಬಿಜ್ಜಳನ ಅರಮನೆಯಲ್ಲಿ ಕಳುವಾಗಿ ತನಿಖೆಗೆ ಗಂಗಯ್ಯನು ಹೋಗಲೇ ಬೇಕಾಗಿ ಬರುವುದು, ಆಗ ಚಿಕ್ಕಯ್ಯನವರಿಗೆ "ಇದೋ ನನ್ನಯ್ಯ ಈಗ ಬರುವೆ, ಇಲ್ಲೇ ಇರಿ ಗುರುವೇ ಕ್ಷಮಿಸಿ" ಎಂದು ಕ್ಷಮೆ ಕೋರುತ್ತಾ ಅರಸನ ಬಳಿಗೆ ಓಡಿದನು.

ಗಂಗಯ್ಯನ ಮಡದಿ ಚೆನ್ನಾಜಿ, ಅತ್ಯಂತ ಸುಂದರಿ ಆದರೆ ಜಾರಿಣಿ. ಶಿವಧ್ಯಾನ ನಿರತರಾದ ನಿಜಗುಣ ಚಿಕ್ಕಯ್ಯನವರನ್ನು ಜಾರತನಕ್ಕೆ ಒತ್ತಾಯಿಸಿದಳು. ಆಗ ಚಿಕ್ಕಯ್ಯನವರು "ನೀನು ನನ್ನ ಹೆತ್ತವ್ವ" ಎಂದು ಕಾಲಿಗೆರಗಿದರು.

ಕಾಲಿಗೆರಗಿದ ಚಿಕ್ಕಯ್ಯನವರ ಮೇಲೆ ಕೋಪಗೊಂಡ ಆ ಜಾರಿಣಿ ಛಲವಾದಿ ಚನ್ನಾಜಿಯು ಚಿಕ್ಕಯ್ಯನವರ ಕೈ ಚೀಲಕ್ಕೆ ತನ್ನ ಆಭರಣಗಳನ್ನು ಹಾಕಿದಳು. ಇದನ್ನರಿಯದ ಚಿಕ್ಕಯ್ಯನವರು ಇನ್ನು ಅಲ್ಲಿರಲು ಇಷ್ಟಪಡದೆ ಮುಂದುವರಿದರು.

ಆಗ ಚನ್ನಾಜಿಯು ದೂರನಿತ್ತು ಅರಸರಲ್ಲಿ "ನನ್ನ ಮಾನಕಳೆಯಲು ಮುಂದಾದ ಈ ಕಪಟಿ ಚಿಕ್ಕಯ್ಯ ನಾನು ಒಪ್ಪದಿರಲು ನನ್ನ ಆಭರಣಕದ್ದು ಒಯ್ದಿರುವ" ಎಂದು ಬಿನ್ನಯಿಸಿದಳು. ಗಂಗಯ್ಯನು ಇದನ್ನು ಒಪ್ಪದಿದ್ದರೂ ಚಿಕ್ಕಯ್ಯನವರಲ್ಲಿ ಕಳುವಾದ ಆಭರಣಗಳು ಸಿಕ್ಕಿ ಕಳ್ಳತನ ರುಜುವಾತಾಗಿ ಚಿಕ್ಕಯ್ಯನವರಿಗೆ ಶಿರಚ್ಛೇಧ ಮಾಡಲು ಆಜ್ಞೆ ಮಾಡಿದನು ಅರಸ ಬಿಜ್ಜಳ.

ಆಜ್ಞೆಯನ್ನು ಚಾರರು ಪಾಲಿಸಲು ಕರೆದೊಯ್ದರು. ಚಿಕ್ಕಯ್ಯನವರ ತಲೆಯನ್ನು ಹರಿತವಾದ ಕತ್ತರಿಯಿಂದ ಕತ್ತರಿಸಿದರು. ತಲೆ ದೂರ ಹಾರಿಬಿತ್ತು. ರಕ್ತ ಜಳಜಳನೆ ಚಿಮ್ಮಿ ಹರಿಯಿತು.

ಆದರೆ ಶಿರವು ನೆಲದಲ್ಲಿ "ಓಂ ನಮಃ ಶಿವಾಯ" ಎಂದು ಒಂದೇಸಮನೆ ಜಪಿಸುತ್ತಿತ್ತು ಕೈಗಳು ರುದ್ರಾಕ್ಷಿಯನ್ನು ಎಣಿಸುತ್ತಿದ್ದವು. ಈ ಅಚ್ಚರಿಯನ್ನು ತಿಳಿದು ಬಿಜ್ಜಳನೂ ಅಲ್ಲದೆ ಬಸವೇಶ್ವರರ ಜೊತೆಯಲ್ಲಿ ಜನರುಸಾಗರದಂತೆ ಸೇರಿದರು. ಅಲ್ಲಿನ ಶಿವ ಮಹಿಮೆಯನ್ನು ಕಂಡು ದಂಗಾದರು.

ಆಗ ನಿಜವಿಷಯ ರಟ್ಟಾಗಿ ತಪ್ಪಿತಸ್ಥರ ಕ್ಷಮೆ ಕೇಳಿದರು. ಬಸವಣ್ಣನವರು ಚಿಕ್ಕಯ್ಯನವರ ಶಿರವನ್ನು ಮತ್ತೆ ಜೋಡಿಸಿ ಶಿವನನ್ನು ಪ್ರಾರ್ಥಿಸಲು ನಿದ್ದೆಯಿಂದ ಎಚ್ಚೆತ್ತವರಂತೆ ಚಿಕ್ಕಯ್ಯನವರು ಎದ್ದು ಕುಳಿತರು. ಇದರಿಂದ ಚಿಕ್ಕಯ್ಯನವರು "ನಿಜಲಿಂಗ ಚಿಕ್ಕಯ್ಯ" ಎಂದು ಪ್ರಸಿದ್ಧರಾದರು.

ಈ ಸಂಗತಿಯಿಂದ ಶಿವಶರಣರಲ್ಲಿ ಬಿಜ್ಜಳನಿಗೆ ಗೌರಾಭಿಮಾನಗಳು ಹೆಚ್ಚಿತು. ತದನಂತರ ಚಿಕ್ಕಯ್ಯನವರು ಅರಮನೆ ಬಿಚ್ಚೊಲೆ ಕಾಯಕ ಹಿಡಿದರು.

ಇತ್ತ ಕಾಶ್ಮೀರದಲ್ಲಿ ಮಹಾದೇವರಾಜನು, ಭಟರು ಬಾರನೆ ಇಲ್ಲಿನ ಎಲ್ಲಾ ವಿಷಯು ತಿಳಿದು ಆತನಿಗೆ ವೈರಾಗ್ಯ ಹುಟ್ಟಿ ಕಲ್ಯಾಣಕ್ಕೆ ಬಂದು ನೆಲಸಿ ಕಟ್ಟಿಗೆಯ ಕಾಯಕ ಹಿಡಿದು ಪತ್ನಿ ಸಹಿತ ಶಿವಜ್ಞಾನಿಯಾದರು. ಇವರು 'ಮೋಳಿಗೆಯ ಮಾರಯ್ಯ'' ಮತ್ತು 'ಮಹಾದೇವಿಯಮ್ಮ ಎಂದು ಪ್ರಸಿದ್ಧರಾಗಿದ್ದಾರೆ.

# ಗ್ರಾಮಾಂತರ ಬಸವ ಜಯಂತಿ

—ಹೆಚ್. ವಿ. ವೀರಭದ್ರಯ್ಯ.

ಆತ್ಮೀಯ ಶರಣ ಬಂಧು,

ದೇವರಾಯಪಟ್ಟಣ ಚಾರಿತ್ರಿಕ ಮಹತ್ವ ಪಡೆದ ಗ್ರಾಮ. ಸಿದ್ಧಗಂಗಾ ಮಠಕ್ಕೂ ಅದಕ್ಕೂ ದೀರ್ಘಕಾಲದ ಸಂಬಂಧ. ಕೂಗಳತೆಯ ದೂರ ಒಂದಕ್ಕೊಂದಕ್ಕೆ ಶ್ರೀ ಮಠದ ಅನುದಿನದ ಕೆಲಸಕಾರ್ಯಗಳಲ್ಲಿ ಗ್ರಾಮ ಬಂಧುಗಳ ಸಕ್ರಿಯ ಪಾತ್ರ, ಅಲ್ಲೊಂದು ಶಿವಾಲಯ. ಶಿಥಿಲ ಸ್ಥಿತಿ. ಅದರ ಜೀರ್ಣೋದ್ಧಾರ. ಅದಕ್ಕಾಗಿ ಪರಮ ಪೂಜ್ಯರಲ್ಲಿ ಗ್ರಾಮ ಬಂಧುಗಳಿಂದ ಭಕ್ತಿಯ ಬಿನ್ನಹ. ಪೂಜ್ಯರ ಒಪ್ಪಿಗೆ. ಶಿವಾಲಯದ ಪ್ರಾರಂಭೋತ್ಸವ. ದಿನಾಂಕ 7-4-86 ರಂದು ಅಲ್ಲಿ ಬಸವ ಜಯಂತಿಯ ಆಚರಣೆ. ನೀನು ಕೇಳಬಹುದು ಬಸವಣ್ಣನವರು ದೇವಾಲಯಗಳ ಸ್ಥಾಪನೆಯಲ್ಲಿ ವಿರೋಧವ್ಯಕ್ತಮಾಡಿದ್ದಾರಲ್ಲ ಎಂದು- ನಿಜ. ಗುರುಕೊಟ್ಟ ಇಷ್ಟಲಿಂಗವನ್ನು ಅನಾದರಣೆಮಾಡಿ ಶಿವಾಲಯದಲ್ಲಿ ಸ್ಥಾಪಿತವಾದ ಸ್ಥಾವರ ಲಿಂಗಕ್ಕೆ ಹೆಚ್ಚು ಮಹತ್ವ ಕೊಡುತ್ತಿದ್ದವರನ್ನೂ ಕಂಡು ಅಣ್ಣ ಹೇಳಿದ್ದು ನಿಜ. ಮತ್ತು ವ್ಯಕ್ತಿಯ ದೌರ್ಬಲ್ಯಗಳನ್ನು ಮುಚ್ಚಿಕೊಳ್ಳಲು ಆಡಂಬರದ ಗುಡಿನಿರ್ಮಾಣ ಮಾಡುತ್ತಿದ್ದವರನ್ನೂ ತಿದ್ದುವ ಹಂತದಲ್ಲಿ ಬಸವಣ್ಣನವರು ಹೇಳಿದ್ದು ಸರಿ. ಆದರೆ, ಇಷ್ಟಲಿಂಗ ನಿಷ್ಠೆಯನ್ನೇ ಭಕ್ತರ ಉದ್ಧಾರದಲ್ಲಿ ಕಾಣುವ, ಕಾಯಕವನ್ನೇ ಶಿವಯೋಗವೆಂದು ತ್ರಿಕರಣ ಪೂರ್ವಕವಾಗಿ ಆಚರಣೆಯಲ್ಲಿಟ್ಟುಕೊಂಡಿರುವ, "ಆವಾ ಕರ್ಮಂಗಳ ಮಾಡಿ ಕೊಡು ಬಸವೇಶ ಅವಗಂ ಶರಣರನು ಸೇವಿಪೆನು ಬಸವೇಶ"-ಎಂಬ ಅಥಣಿಯಪ್ಪಗಳ ನಿತ್ಯ ಮಂತ್ರವನ್ನು ಅನುಷ್ಠಾನದಲ್ಲಿ ತಂದಿರುವ ಪೂಜ್ಯ ಶ್ರೀ ಶ್ರೀಗಳು ದೇವರಾಯಪಟ್ಟಣದ ಭಕ್ತಜನತೆಯ ಪ್ರಾರ್ಥನೆಯನ್ನು ಈಡೇರಿಸಿದರು. ಅದೂ ಅವರ ದೃಷ್ಟಿಯಲ್ಲಿ ಬಸವಣ್ಣನವರ ಸೇವೆಯೇ ಅಲ್ಲದೆ, ಸಮಾಜ ಸಂಘಟನೆಯ ಒಂದು ರಚನಾತ್ಮಕ ಮಾರ್ಗವೂ ಹೌದಲ್ಲವೆ?

ಪ್ರಾತಃಕಾಲದ ಅಧಿವೇಶನದಲ್ಲಿ ಶ್ರೀ ಸಿದ್ಧಗಂಗಾ ಕಾಲೇಜಿನ ರಾಜ್ಯಶಾಸ್ತ್ರದ ಉಪನ್ಯಾಸಕರಾದ ಶ್ರೀ ಕೆ. ಎಸ್. ಶಂಕರಯ್ಯ ದೇವರಾಯ ಪಟ್ಟಣದ ಶ್ರೀ ಡಿ. ರುದ್ರಯ್ಯ ಶ್ರೀ ಸಿದ್ಧಗಂಗಾ ಕಾಲೇಜಿನ ಉಪನ್ಯಾಸಕರಾದ ಶ್ರೀ. ಹೆಚ್. ವಿ. ವೀರಭದ್ರಯ್ಯ ಅವರುಗಳು ಬಸವಾದಿ ಶರಣರ ಜೀವನದ ಪರಿಚಯ ಮಾಡಿಕೊಟ್ಟರು.



ಬಸವಣ್ಣ ತುಂಬು ಜೀವಿ. ವಿನಯಕ್ಕೆ ಮತ್ತೊಂದು ಹೆಸರು. ದಾಸೋಹಕ್ಕೆ ತವರು. ಮರ್ತ್ಯವನ್ನು ಕೈಲಾಸವಾಗಿಸಿದ ಮಹಾನುಭಾವ. ಕಾಯಕ, ಕಾಯಕಗಳೇ ಕೈಲಾಸವೆಂಬುದನ್ನು ಅರ್ಥಪೂರ್ಣವಾಗಿ ಮಾಡಿದ ಪೂರ್ಣಮೂರ್ತಿ. ಮಹಾ ದಾರ್ಶನಿಕ. ಮನುಕುಲದ ಚರಿತ್ರೆಯನ್ನು ಅರಳಿಸಿದ ವಿಶಿಷ್ಟವ್ಯಕ್ತಿತ್ವ. ಅವರು ಎಂದಿಗಿಂತ ಇಂದು ಹೆಚ್ಚು ಪ್ರಸ್ತುತ. ಇಂದಿನ ಯುವಜನಾಂಗ ಬಸವಣ್ಣನವರನ್ನು ಹೆಚ್ಚು ಅಭ್ಯಾಸಮಾಡಿದಷ್ಟೂ ಒಳ್ಳೆಯದು. ಆಧುನಿಕ ಮನೋಧರ್ಮದ ಯುವ ಜನತೆಗೆ ಬಸವಣ್ಣನವರು ಆತ್ಮೀಯರಾಗುವಲ್ಲಿ ಸಂದೇಹವಿಲ್ಲ. ಅವರು ಕೊಟ್ಟ ಮಹಾಮಂತ್ರ ಇಡೀ ವಿಶ್ವಕ್ಕೆ ದಾರ್ಗದರ್ಶಕ. ಕಾಯಕ ಮತ್ತು ದಾಸೋಹ ತತ್ವಗಳು ಇಂದು ವಿಶ್ವಮಾನ್ಯವಾಗುತ್ತಿವೆ. ಅಂತೆಯೇ "ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯಾ, ಇವನಮ್ಮವ, ಇವನಮ್ಮವ, ಇವನಮ್ಮವನೆಂದೆನಿಸಯ್ಯಾ"-ಎಂಬ ವಿಶ್ವಭ್ರಾತೃತ್ವದ ಸಂದೇಶ ಇಂದು ಅಗತ್ಯವಾಗಿದೆ. ವ್ಯಕ್ತಿ ಶುದ್ಧ ಚಾರಿತ್ರ್ಯವಂತನಾದರೆ ಸಮಾಜಕ್ಕೆ ಬೆಲೆ ಬರುತ್ತದೆ, ರಾಷ್ಟ್ರಕ್ಕೆ ಗೌರವಬರುತ್ತದೆ. ಅಂದಣವನೇರಿದ ಸೊಣಗ" ನಂತಾಗಬಾರದು ಜೀವನ. ಪವಿತ್ರ ಉದ್ದೇಶದಿಂದ ಮಾಡಿದ ಯಾವ ಕೆಲಸವೂ ಅಪವಿತ್ರವಾಗದಂತೆ ನಡೆಯುವ ಸಂಕಲ್ಪಬೇಕು. ಗ್ರಾಮದ ಆಸ್ತಿಕ ಬಂಧುಗಳು ಇಂದು ಪ್ರಾರಂಭವಾಗುತ್ತಿರುವ ಶಿವಾಲಯದ ನಿತ್ಯ ಪೂಜಾದಿಗಳನ್ನು ಬೆಳಸಿಕೊಳ್ಳುವಂತಾಗಲಿ ಎಂದು ಆಶೀರ್ವಚನ ಮಾಡಿದರು ಪರಮ ಪೂಜ್ಯ ಶ್ರೀ ಶ್ರೀಗಳವರು ಅಧ್ಯಕ್ಷ ಪೀಠದಿಂದ.

ರಾತ್ರಿ ಕೊಂಚತಡವಾಗಿ ಜಗಜ್ಯೋತಿ ಬಸವೇಶ್ವರ ನಾಟಕ ಪ್ರಾರಂಭವಾಯಿತಾದರೂ ಬೆಳಗಿನತನಕ ಪ್ರದರ್ಶನ ಕಿಕ್ಕಿರಿದ ಜನತೆಗೆ ಹನ್ನೆರಡನೆಯ ಶತಮಾನದ ಭಕ್ತಿಜೀವನದ ಲೋಕಕ್ಕೆ ಕೊಂಡೊಯ್ದಿತು. ಬಸವಣ್ಣನವರು ಕೂಡಲಸಂಗಮಕ್ಕೆ ಕಲ್ಯಾಣದಿಂದ ನಿರ್ಗಮಿಸುವ ದೃಶ್ಯ ಹಿರಿಯ ಜೀವಿಗಳ ಕಣ್ಣಲ್ಲಿ ನೀರು ತರಿಸಿತ್ತು. ಅವರು ನಿಟ್ಟುಸಿರಿನೊಂದಿಗೆ ಕಣ್ಣು ಒರೆಸಿಕೊಳ್ಳುತ್ತಿದ್ದುದನ್ನು ವರದಿಗಾರ ಗಮನಿಸಿದಾಗ ಸಿದ್ಧಗಂಗೆಯ ಸೇವೆಗೆಸಂದ ಸಾರ್ಥಕ ಫಲ ಎನಿಸಿತು. ನಾಟಕ ಮುಗಿದಾಗ ಶ್ರೀ ಮಠದ ಬೆಟ್ಟದ ಮೇಲಿನ ಸಿದ್ಧಲಿಂಗೇಶ್ವರನ ರುದ್ರಾಭಿಷೇಕದ ಮಂತ್ರಘೋಷ ಕೇಳಿಸುತ್ತಿತ್ತು.

(ಮತ್ತೆ ಬರೆಯುತ್ತೇನೆ)

---

[ಅಂಧಶ್ರದ್ಧೆಗಳು ಮೂಢನಂಬಿಕೆಗಳು] 30ನೇ ಪುಟದ ಲೇಖನಕ್ಕೆ ಸಂಬಂಧಿಸಿದ್ದು.
ಏನಾದರೂ ಮಾಡಹೊರಟೆಯೋ ಉಪಕರಣ ಸಲಕರಣೆಗಳು ಬೇಕಾಗುತ್ತವೆ ಅಂತೆ ಲಜ್ಜೆ ಕಟ್ಟುಪಾಡು ರೀತಿ ರಿವಾಜು ರೂಢಿ ಪದ್ಧತಿ ಕರತೆರಿಗೆ ಲಂಚ ವಂಚನೆ ಮರೆ ಮೋಸಗಳ ದೂರ್ತ ಜಗತ್ತು, ಅದರಲ್ಲಿ ನಿನ್ನ ಮೂರ್ಖ ಮನಸ್ಸು ಈ ವಾರ್ಶ್ಯಸೂಯೆ

## 'ಹಳೆಯ ವಿದ್ಯಾರ್ಥಿ ಸಂಘದ'

### ಆಜೀವ ಸದಸ್ಯತ್ವ ಪಡೆದಿರುವರು

241 ಶ್ರೀ ಎಂ ಪುಟ್ಟಾಚಾರಿ. ಕನ್ನಡ ಪಂಡಿತರು ನೇತಾಜಿ ಪ್ರೌಢಶಾಲೆ ಮುತ್ತನಲ್ಲೂರು, ಬೆಂಗಳೂರು ಜಿಲ್ಲೆ.

242 ಶ್ರೀ ದಾಳಪ್ಪ ಯಾಂತ್ರಿಕ ಇಲಾಖೆ ಕೆ. ಆರ್. ವೃತ್ತ ಬೆಂಗಳೂರು, 560001

243 ಶ್ರೀ ಎಂ. ಜಿ. ಮಹದೇವಯ್ಯ ನಂ 170 (ಡಿ&ಹೆಚ್) ಗಡಿಯಾರ ಖಾರ್ಖಾನೆ ನಂ 4 ತುಮಕೂರು-3

244 ಶ್ರೀ ಎ. ಎಸ್. ಶಿವಲಿಂಗಯ್ಯ ಸಹಕಾರ ಸಂಘಗಳ ಹಿರಿಯ ಲೆಕ್ಕ ಪರಿಶೋಧಕ ಮಧುಗಿರಿ.

245 ಶ್ರೀ ಎಂ. ಬಸವರಾಜಯ್ಯ ಸಹಾಯಕ ಆಯುಕ್ತರು ಇಗ್ಗ್ಲೂರ್ ಯೋಜನೆ ಇಗ್ಗ್ಲೂರ್. ಚನ್ನಪಟ್ಟಣ ತಾ||.

246 ಶ್ರೀ ಹೆಚ್. ವಿ. ರಾಜಣ್ಣ ನಂ 22, 12 ನೇ ಕ್ರಾಸ್ ಬೋವಿಪಾಳ್ಯ, ಮಹಾಲಕ್ಷ್ಮೀಪುರಂ ಅಂಚೆ ಬೆಂಗಳೂರು-560086

247 ಶ್ರೀ ಡಿ. ಜಿ ಲಿಂಗದೇವರು, ಗುಮಾಸ್ತರು, ವಿಜಯಾ ಬ್ಯಾಂಕ್ ಡಾಬಸ್ ಪೇಟೆ, ನೆಲಮಂಗಲ ತಾಲ್ಲೂಕ್.

248 ಶ್ರೀ ಕೆಂಪೇಗೌಡ, ಆರೋಗ್ಯ ಇಲಾಖೆ, ಹಿರೇಹಳ್ಳಿ ಮತ್ತು ಅಂಚೆ, ತುಮಕೂರು ತಾ||.

249 ಶ್ರೀ ವಿದ್ವಾನ್ ದೊಡ್ಡ ಹೊನ್ನಯ್ಯ "ಮಾರುತಿ ನಿಲಯ" ಕೃಷ್ಣರಾಜ ಸಾಗರ ಅಗ್ರಹಾರ, ಕುಣಿಗಲ್.

250 ಶ್ರೀ ವಿದ್ವಾನ್ ಎಸ್. ಪಿ. ಶಿವಶಂಕರ್ ಪ್ರಾಂಶುಪಾಲರು. ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜು. ಸಿದ್ಧಗಂಗಾ ಮಠ.

251 ಶ್ರೀ ಬಿ. ಎಸ್ ಸಿದ್ಧರಾಮಯ್ಯ. ನಂ 151, ಎ. ಜಿ. ಕಾಲೋನಿ ಹೆಬ್ಬಾಳ ಲೇಔಟ್ ಬೆಂಗಳೂರು-560024

252 ಶ್ರೀ ಎಂ. ಶಿವಣ್ಣ ಆಡಿಟರ್ ನಂ 476, 3ನೇ ಬ್ಲಾಕ್ ರಾಜಾಜಿನಗರ ಬೆಂಗಳೂರು. 56001

253 ಶ್ರೀ ಆರ್. ಮಹದೇವಯ್ಯ ನಂ 78, ಎ 16ನೇ ಕ್ರಾಸ್ ವಿಲ್ಸನ್ ಗಾರ್ಡನ್, ಬೆಂಗಳೂರು-560027

254 ಶ್ರೀ ಟಿ ಎಂ. ರೇಣುಕಾರಾಧ್ಯ, ನಿವೃತ್ತ ಉಪಾಧ್ಯಾಯರು ಕಂಚಿ ಘಟ್ಟ ರಸ್ತೆ ತಿಪಟೂರು ನಗರ

255 ಶ್ರೀ ಚಿಕ್ಕಹೊನ್ನಯ್ಯ ನಂ 208 3ನೇ ಮುಖ್ಯ ರಸ್ತೆ, ಭೀಮರಾಜ ಪೇಟೆ ಬೆಂಗಳೂರು-560018

(ಮುಂದುವರಿಯುತ್ತದೆ)

"SIDDAGANGA" MONTHLY Reg No.KRN Q-9

॥ ಓಂ ॥

# ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ
# 1987

## ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ.

- ಈ ವರ್ಷ ವಸ್ತುಪ್ರದರ್ಶನವು ಮಹಾಶಿವರಾತ್ರಿ ಜಾತ್ರೆಯ ಅಂಗವಾಗಿ ಶ್ರೀ ಸಿದ್ಧಗಂಗಾಮಠದ ಹಳೆಯ ವಿದ್ಯಾರ್ಥಿ ಸಂಘದ ವತಿಯಿಂದ ಫೆಬ್ರವರಿ 23ನೇ ತಾರೀಖಿನಿಂದ ಪ್ರಾರಂಭವಾಗಲಿದೆ.
- ಕೇಂದ್ರ ಮತ್ತು ರಾಜ್ಯಸರ್ಕಾರದ ಇಲಾಖೆಗಳು, ಖಾಸಗಿ ಸಂಘ ಸಂಸ್ಥೆಗಳು ಮತ್ತು ಇತರ ಉದ್ದಿಮೆಗಳು ಹಾಗೂ ಗ್ರಾಮ ಕೈಗಾರಿಕೆಗಳು ಭಾಗವಹಿಸಿದ್ದು ನಗರ ಜನರಿಗಲ್ಲದೆ ಲಕ್ಷಾಂತರ ರೈತಾಪಿ ಜನಂಗೆ ಈ ವಸ್ತುಪ್ರದರ್ಶನವು ಮಾರ್ಗದರ್ಶಕವಾಗಿದೆ.
- ಈಗಾಗಲೇ ಕಳೆದ 23 ವರ್ಷಗಳಿಂದ ಕೋಟ್ಯಾಂತರ ಜನರನ್ನು ಈ ವಸ್ತು ಪ್ರದರ್ಶನವು ಆಕರ್ಷಿಸುತ್ತದೆ.
- ಫೆಬ್ರವರಿ 23 ರಿಂದ ಪ್ರಾರಂಭವಾಗಲಿರುವ ನಮ್ಮ ವಸ್ತು ಪ್ರದರ್ಶನವು ಮಾರ್ಚ್ 9 ರವರೆಗೆ ನಡೆಯಲಿದ್ದು ಪ್ರತಿದಿನ ಸಂಜೆ ವಸ್ತು ಪ್ರದರ್ಶನದಲ್ಲಿ ನೃತ್ಯ, ಸಂಗೀತ, ನಾಟಕ ಮೊದಲಾದ ಸಾಂಸ್ಕೃತಿಕ ಮತ್ತು ಮನರಂಜನಾ ಕಾರ್ಯಕ್ರಮಗಳು ಹಾಗೂ ಉಪಯುಕ್ತ ವಿಷಯಗಳ ಚಲನಚಿತ್ರ ಪ್ರದರ್ಶನಗಳನ್ನು ಏರ್ಪಡಿಸಲಾಗಿದೆ. ಕಾರ್ಯಕ್ರಮಗಳನ್ನು ಕೊಡಲಿಚ್ಛಿಸುವರು ಸಮಿತಿಯವರನ್ನು ಸಂಪರ್ಕಿಸಬೇಕಾಗಿ ಕೋರಿದೆ.
- ಮತ್ತೊಂದು ವಿಷಯವೆಂದರೆ ಈ ವರ್ಷ ಜಾತ್ರೆಯೂ ಕೂಡ ಶ್ರೀ ಮಹಾಶಿವರಾತ್ರಿ ದಿವಸದಿಂದ [26-2-87] ಪ್ರಾರಂಭವಾಗಲಿದೆ. ಮಳಿಗೆಗಳನ್ನು ಕಾಯ್ದಿರಿಸುವವರಿಗೆ ಸವಲತ್ತು. ವ್ಯಾಪಾರಸ್ಥರು ಹೆಚ್ಚು ಹೆಚ್ಚಾಗಿ ಬಂದು ಇದರ ಉಪಯೋಗವನ್ನು ಪಡೆಯಬೇಕಾಗಿ ವಿನಂತಿ.
- ಗ್ರಾಮೀಣ ಬಂಧುಗಳು ಜಾತ್ರೆಗೆ 20-2-87 ನೇ ತಾರೀಖಿನಿಂದ ತಮ್ಮ ತಮ್ಮ ರಾಸುಗಳೊಂದಿಗೆ ಆಗಮಿಸಲು ಕೋರಿದೆ.
- ರೈತ ಬಾಂಧವರಿಗೆ ಈ ವಸ್ತುಪ್ರದರ್ಶನ ವರಪ್ರದವಾಗಿದೆ.

ವಸ್ತು ಪ್ರದರ್ಶನ ಸಮಿತಿ
ಶ್ರೀ ಸಿದ್ಧಗಂಗಾ ಮಠ

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ